# ರಾಜರಹಸ್ಯ

(ಕೌತುಕಮಯ ಕಾದಂಬರಿ)



ಲೇಖಕರು:

ಶ್ರೀಮಾನ್ ರಾ. ನ. ಮಳಗಿ,

ಹುಬ್ಬಳ್ಳಿ



ಜಯಕರ್ನಾಟಕ ಕಾರ್ಯಾಲಯ,

ಧಾರವಾಡ

ಮೊದಲ ಮುದ್ರಣ] [ಬೆಲೆ ಹನ್ನೆರಡಾಣೆ

# ಮುನ್ನುಡಿ

---

ರಹಸ್ಯಕ್ಕಾಗಿ ಹೆಣಗುವುದು ಮಾನವಸ್ವಭಾವವಾಗಿದೆ. ಇದರಲ್ಲಿಯೇ ಅವನ ಆನಂದವಿದೆ; ಉನ್ನತಿಯಿದೆ. ವೇದಾಂತಿಯು ಧರ್ಮರಹಸ್ಯವನ್ನರಿಯಲು ಹೆಣಗುವನು; ವಿಜ್ಞಾನಶಾಸ್ತ್ರಜ್ಞನು ಭೌತಿಕವಸ್ತುಗಳ ಮರ್ಮವನ್ನರಿಯಲು ಹವಣಿಸುವನು; ತಾರೆಗಳ ಗುಟ್ಟನ್ನರಿಯಲೆಂದೇ ಜ್ಯೋತಿಷಿಯ ಹೋರಾಟವು; ಸೌಂದರ್ಯರಹಸ್ಯಕ್ಕಾಗಿಯೇ ಸಾಹಿತಿಯ ಸಾಹಸವು. ಒಟ್ಟಿನಲ್ಲಿ ನಾವೆಲ್ಲರೂ ರಹಸ್ಯಪ್ರೇಮಿಗಳು.

ಅಸಂಸ್ಕೃತಮತಿಗಳನ್ನು ಸಹ ಈ ಹುಚ್ಚು ಬಿಟ್ಟಿಲ್ಲ. ಭವಿಷ್ಯವು ಬಹು ರಹಸ್ಯಪೂರ್ಣವಾದುದು. ಅದನ್ನರಿಯಲು ಅವರು ಕಾಲಜ್ಞಾನಕ್ಕೆ ಕಿವಿಗೊಡುವರು. ಅತ್ತ ವಾಯುಮಂಡಲಶಾಸ್ತ್ರಜ್ಞನು ( Meteorologist ) ತನ್ನದೊಂದು ಸಿದ್ಧಾಂತವನ್ನು ಸ್ಥಾಪಿಸುತ್ತಿರುವಾಗ ಇತ್ತ ಜೋಯಿಸನು ಪಂಚಾಂಗವನ್ನೋದಿಸಿದ್ಧಾಂತಿಸುತ್ತಿರುವನು. ಅಂತೂ ಮಳೆಬೀಳುವುದರ ಮರ್ಮವನ್ನರಿವುದು ಇಬ್ಬರಿಗೂ ಬೇಕಾಗಿದೆ. ಇದರಂತೆಯೇ ಕಾದಂಬರೀಭಕ್ತರೂ ಸಹ ಘಟಿತ ಅಥವಾ ಕಲ್ಪಿತ ಸಂಗತಿಗಳ ರಹಸ್ಯವನ್ನರಿಯುವುದರಲ್ಲಿ ತಲ್ಲೀನರಾಗಿರುವರು; ಮುಂದಾಗುವುದನ್ನರಿಯದೆ ಮುನಿಯುವರು; ಈ ಮುನಿಸಿನಲ್ಲಿಯೇ ಅವರ ಮುಗುಳ್ನಗೆ

ಇರುವುದು. ಕಥಾಕೌತುಕವು ಮಿತಿಮೀರಿದಂತೆ ಅವರು ಕುಣಿಯುವರು; ನಂತರ ಅದರಲ್ಲಿಯೇ ಮೈಮರೆತು ನಲಿಯುವರು. ಆದರೆ ಕೌತುಕಮಯ ಕಥಾವಸ್ತುಗಳಿಂದ ಅವರನ್ನು ಕುಣಿಸಬಲ್ಲ ಕಾದಂಬರಿಗಳು ನಮ್ಮಲ್ಲಿಷ್ಟಿವೆ? ಈ ಕೊರತೆಯನ್ನು ಕೆಲಮಟ್ಟಿಗೆ ಕಳೆಯಲೆಂದೇ ಈ ಕಾದಂಬರಿಯ ಸೃಷ್ಟಿಯಾಗಿದೆ.

ನಿಮ್ಮೆಲ್ಲರ ಆನಂದವೇ ಗ್ರಂಥರಚನೋದ್ದೇಶವು. ಅದು ಪ್ರತಿಪುಟದಿಂದಲೂ ಸಿದ್ಧಿಸುವುದೆಂದು ನಾನು ನಂಬಿ-ದ್ದೇನೆ. ಇದಕ್ಕಾಗಿಯೇ ಆಂಗ್ಲ ಸಾಹಿತ್ಯ ಸಾಗರದಿಂದ ಆಣಿಮುತ್ತೊಂದನ್ನು ಅತಿಶ್ರಮ ವಹಿಸಿ ಆಯ್ದುಕೊಂಡೆನು. ಕಥಾವಸ್ತುವನ್ನು ಹೆಚ್ಚು ಕೌತುಕಮಯವಾಗಿರುವಂತೆ ಅಳವಡಿಸಿದೆನು. ಕಾದಂಬರಿಯು ಸಾಧ್ಯವಾದಷ್ಟು ಕಾವ್ಯಮಯವಾಗುವಂತೆ ಮೆರಗು ಕೊಟ್ಟೆನು. ಚಾರಿತ್ರಿಕ-ವೆಂದು ಕಂಡುಬಂದರೂ ಇದು ಐತಿಹಾಸಿಕ ಕಾದಂಬರಿಯಲ್ಲ. ಇಲ್ಲಿಯ ಹೆಸರುಗಳು ನಮ್ಮ ಇತಿಹಾಸಗಗನದ ಯಾವ ಜ್ಯೋತಿಗೂ ಅನ್ವಯಿಸುವುದಿಲ್ಲ. ಒಟ್ಟಿನಲ್ಲಿ ಸ್ವಪ್ನವು ಯಾವುದರಿಂದ ಸೃಷ್ಟಿಸಲ್ಪಟ್ಟಿದೆಯೋ ಅದೇ ವಸ್ತುವಿನಿಂದ ಇದರ ರಚನೆಯಾಗಿದೆ.

ಇದರಲ್ಲಿ ಪ್ರಯೋಗಿಸಲ್ಪಟ್ಟಿರುವ ಭಾಷಾಶೈಲಿಯ ವಿಷಯವಾಗಿ ಒಂದೆರಡು ಮಾತುಗಳನ್ನಿಲ್ಲಿ ಹೇಳುವುದು ಉಚಿತವಾದುದು.

ಸಾಧಾರಣವಾಗಿ ಕಥಾಪ್ರೇಮಿಗಳು ವೇಗವಾಗಿ ಓದುವ ಸ್ವಭಾವದವರು. ಅವರ ವಿಪರೀತವಾದ ಓಟಕ್ಕೆ

ಇಲ್ಲಿ ಅಷ್ಟು ಅವಕಾಶವಿಲ್ಲ. ಕಾವ್ಯಗಳಲ್ಲಿ ಸಂಧಿ-ಸಮಾಸಗಳು ಮೇಲಿಂದ ಮೇಲೆ ಬರುತ್ತವೆ. ಕಾವ್ಯಪರಿಚಿತ ಪದಗಳೂ ಹಲವಿವೆ. ಓದುಗರ ಹಿತೋದ್ದೇಶದಿಂದಲೇ ಇಂತಹ ಶೈಲಿಯನ್ನಿಲ್ಲಿ ಪ್ರಯೋಗಿಸಿದೆ. ಇದರ ಪರಿಣಾಮವಾಗಿ ಓದುಗರು ನಿರ್ವಾಹವಿಲ್ಲದೆ ನಿಧಾನವಾಗಿಯೇ ಓದುವರು. ಅಥವಾ ಅವರ ಓದುವ ಓಟವು ಕಡಿಮೆಯಾಗುವುದು. ಇದರಿಂದ ಪ್ರತಿಶಬ್ದವೂ ಅವರ ಮನದ ಮೇಲೆ ಮೂಡಿ ತಾನು ಮಾಡಬೇಕಾದ ಕಾರ್ಯವನ್ನು ಮಾಡಲನುವಾಗುವುದು. ಹೃದಯಾಹ್ಲಾದಕರವಾದ ಮಿತವರ್ಣನ, ವ್ಯಂಗ್ಯ, ಹಾಸ್ಯವೇ ಮೊದಲಾದುವಿದ್ದರೆ ಅವು ಓದುಗರ ಕೈ ಬಿಡುವುವಿಲ್ಲ. ಅನುಪ್ರಾಸ, ಪದಮಾಧುರ್ಯ, ಶೈಲಿಗಳ ಸೊಬಗು ಇವುಗಳಲ್ಲಿ ಚೆಲ್ವಿಕೆ ಇದ್ದರೆ ಅದು ಅವರಿಗೆ ಹೊಳೆದು ತೋರುವುದು. ಮತ್ತು ನಿಧಾನವಾಗಿ ಓದಿದ ಭಾಗವು ಹೆಚ್ಚು ಪರಿಣಾಮಕಾರಕವಾಗುವುದರಿಂದ ತೆರೆತೆರೆಗಳಾಗಿ ಬರುವ ಕಥಾಸಂದರ್ಭಗಳು ಹೆಚ್ಚು ರುಚಿಕರವಾಗುವುವು. ಇದಲ್ಲದೆ ಅನೇಕ ಭಾಗಗಳಲ್ಲಿ ಹೊರಬೀಳಬಹುದಾದ, ಅಸಂಖ್ಯ ಹೆಸರುಗಳಿಂದ ತುಂಬಿದ, ಸಾಧ್ಯವಾದಷ್ಟು ಸಂಕ್ಷೇಪಿಸಿ ಬರೆದ, ಇಂತಹ ಅತಿ ವಿಸ್ತಾರವಾದ ಕಾದಂಬರಿಯನ್ನರಿಯಲು ಇದೇ ಒಳ್ಳೆಯ ಮಾರ್ಗ. ಹಾಗೂ ಹೊಸಗನ್ನಡ ಗದ್ಯದಲ್ಲಿಯ ಹೊಸಶೈಲಿಯಿಂದ ಹಲವರಿಗೆ ಹೊಸರುಚಿಯುಂಟಾಗಬಹುದು.

ಈ ಕಾದಂಬರಿಯ ಪ್ರತಿಯೊಂದು ಭಾಗವೂ ಒಂದು ವಿಧದಲ್ಲಿ ಪೂರ್ಣತೆಯನ್ನು ಹೊಂದಿದೆ. ಓದುಗರ

ಸೌಕರ್ಯಕ್ಕಾಗಿ ಪ್ರತಿ ಮುಂದಿನ ಭಾಗದಲ್ಲಿಯೂ ಹಿಂದಿನ ಭಾಗದ ಅಥವಾ ಭಾಗಗಳ ಸಾರಾಂಶವು ಕೊಡಲ್ಪಟ್ಟಿದೆ.

"ಕಲಾಸಿಂಧು" ವಿನಿಂದ ಇದನ್ನು ಹೊರತೆಗೆದ "ಜಯಕರ್ನಾಟಕ"ದ ಮಾನ್ಯ ಸಂಪಾದಕರಾದ ಶ್ರೀಮಾನ್ ಬೆಳಗಾವಿ ರಾಮಚಂದ್ರರಾಯರಿಗೆ ನಾನು ಚಿರಕೃತಜ್ಞನಾಗಿದ್ದೇನೆ.

ಹುಬ್ಬಳ್ಳಿ
ತಾ|| ೧-೧೨-೧೯೩೬.

ರಾಮಚಂದ್ರ ನರಸಿಂಗರಾವ
ಮುಳಗಿ

# ಪ್ರಕರಣಗಳ ಪರಿವಿಡಿ



(ಜಯಕರ್ನಾಟಕದ ೧೪ನೆಯ ಸಂಪುಟದಿಂದ ಪುನಃ ಮುದ್ರಿತ)

# ರಾ ಜ ರ ಹ ಸ್ಯ



## ಮಿಥ್ಯಾನಾಮಧಾರಿಗಳು

ಅಪರಿಚಿತ ವ್ಯಕ್ತಿಯೊಡನೆ ಸಂಭಾಷಣೆಯಲ್ಲಿ ತಲ್ಲೀನರಾದ ಯುವತಿಯರಿಬ್ಬರೂ ಗಡಿಯಾರದಲ್ಲೊಂದು ಬಾರಿಸಲು ಬಹು ಭ್ರಾಂತರಾದರು. ಇದನ್ನಾ ಚತುರ ಪುರುಷನು ಅರಿಯದಿರಲಿಲ್ಲ.

ಅವನಿನ್ನು ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿ ಆಸನದಿಂದೆದ್ದು ಹೊರಹೊರಡತಕ್ಕವನು. ಈ ಸಂಧಿಯಲ್ಲೊಂದು ದೊಡ್ಡ ಶಬ್ದವು ಮನೆಯ ಮುಂದಿನ ಬೀದಿಯಲ್ಲಾಗಿ, ಕುದುಗಳ ಹೊಯಿದಾಟವೂ ಬಂಡಿಯಲ್ಲಿಯ ರಮಣಿಯರ ಚೀರಾಟವೂ ಸೇವಿಕೆಯ ಗೋಳಾಟವೂ ಸಮ್ಮಿಶ್ರಿತವಾಗಿ ನಿಶಾದೇವಿಯ ಮೌನವನ್ನು ಮುರಿದುವು.

ಶೀತಲವಾಯುವಾಗ ವೇಗದಿಂದ ಬಂದು ಅಲ್ಲಿದ್ದೊಂದೇ ದೀಪವನ್ನಾರಿಸಿಬಿಟ್ಟನು. ರಾಜಶೀವಿಯುಕ್ತನಾದಾ ಅಪರಿಚಿತನು ಕೌತುಕದಿಂದೆದ್ದು ಬಾಗಿಲನ್ನು ತೆರೆದನು.

ತಂದೆಯು ಊರಿನಿಂದಿನ್ನೂ ಬಂದಿರಲಿಲ್ಲವಾದುದರಿಂದ ಅಕ್ಕತಂಗಿಯರಿಬ್ಬರೇ ಮನೆಯಲ್ಲಿದ್ದರು. ಇಂತಹ ಪರಿಸ್ಥಿತಿಯಲ್ಲಿ ಆ ಸಾಹಸಮಯ ರಾತ್ರಿಯು ಅವರನ್ನು ಮುಂದುಗಾಣದಂತಿರಿಸಿತು.

ನಮ್ಮ ಕಥಾನಕದಲ್ಲಿ ಬಹುಮುಖ್ಯ ಭಾಗವನ್ನು ವಹಿಸುವ ಈ ರಮಣೀಮಣಿಯರಲ್ಲಿ, ೨೧ ವರ್ಷದ ಹಿರಿಯಳು

ಚಂದಿರನನ್ನೂ ೧೯ ವರ್ಷದ ಕಿರಿಯಳು ಕಮಲವನ್ನೂ ಹಾಸ್ಯಮಾಡುವಂತೆ ಮನೋಹರೆಯರಾಗಿದ್ದರೆಂದು ಸೂಚಿಸಿದರೆ ಪರಿಚಿತಕಾವ್ಯರಾದ ನಮ್ಮ ವಾಚಕರು ನೈಜಚಿತ್ರಗಳನ್ನು ಕಲ್ಪಿಸಬಲ್ಲರು.

ಆಗ ತಾನೇ ಸಹಾನುಭೂತಿಯುಳ್ಳ ಸೋಮನು ಮೇಲಿನಿಂದಿಣಿಕಿನೋಡಿದನು. ಬಂಡಿಯ ಅಚ್ಚು ಮುರಿದಿತ್ತು; ಸಾರಥಿಯು ಕೆಳಗುರುಳಿದ್ದನು; ದೂರದಲ್ಲಿ ಗಾಲಿಯಿನ್ನೂ ತಿರುಗುತ್ತಾ ಬಿದ್ದಿತ್ತು; ಇನ್ನೊಂದೆಡೆಯಲ್ಲಿ ದಾಸಿಯೊಬ್ಬಳು ಚೇತರಿಸಿಕೊಳ್ಳುತ್ತಿದ್ದಳು.

ಮಿಂಚಿನಂತೆ ಬಹು ಬೇಗನೆ ಆ ಅಪರಿಚಿತನೂ ತರುಣಿಯರೂ ಅಲ್ಲಿಗೆ ಬಂದರು. ಆರ್ತನಾದವು ಪ್ರತಿಧ್ವನಿಸಿದ ಪೆಟ್ಟಿಗೆಯ ಗಾಡಿಯ ಕಡೆಗೆ ಅಪರಿಚಿತನು ನುಗ್ಗಿದನು. ದಾಸಿಯನ್ನು ರಮಣಿಯರಿಬ್ಬರೂ ಹಿಡಿದೆಬ್ಬಿಸಿದರು.

ಇಷ್ಟರಲ್ಲಿ ಸಾರಥಿಯೂ ಚೇತರಿಸಿಕೊಂಡೆದ್ದನು; ಅವನಿಗೆ ಬಲವಾದ ಗಾಯಗಳಾಗಿದ್ದುವು. ಇನ್ನಾರ ಪರಿಸ್ಥಿತಿಯೂ ಭಯಾನಕವಾಗಿರಲಿಲ್ಲ.

ಅತ್ತ ಆ ಅಪರಿಚಿತನು ಪೆಟ್ಟಿಗೆಯೊಳಕ್ಕೆ ಇಣಿಕಿನೋಡಿದನು. ದೂರಿನ ಮೂಲೆಯಲ್ಲಿದ್ದ ದಿವ್ಯಸುಂದರಿಯೊಬ್ಬಳು ದೃಷ್ಟಿಗೆ ಬೀಳಲು, ಅವನು ಬೆದರಿ, ಆಶ್ಚರ್ಯದಿಂದ ಮೈಮರೆತು, ಗಟ್ಟಿಯಾಗಿ ಚೀರಿ, ಬಂಡಿಯ ಹಿಂಬದಿಗೆ ಸರಿದು, ಎತ್ತಲೋ ಓಡಿಹೋದನು.

ಆ ವ್ಯಕ್ತಿಯ ವಿಚಿತ್ರ ವರ್ತನವನ್ನರಿತು ಬಂಡಿಯಲ್ಲಿಯ ಭಾಮೆಯರು ಬಹು ಭಯಗ್ರಸ್ತರಾದರು. ಅವರನ್ನು ಕೆಳಗಿಳಿಸದೆ ಅವನೋಡಿಹೋಗಲು ತಾರೆಯೂ ಲೀಲೆಯೂ

ಮುಂಬರಿದರು. ಅವನ ಅಸಭ್ಯವರ್ತನಕ್ಕಾಗಿ ಈ ಅಕ್ಕ ತಂಗಿಯರಿಗೂ ಆಶ್ಚರ್ಯವಾಗದಿರಲಿಲ್ಲ. ತಮಗೆ ಸಹ ಹೋಗಿ ಬರುತ್ತೇನೆಂದು ಹೇಳದೆ ಹೋದುದು ಅಸಭ್ಯತನ ವೆಂದು ತಿಳಿದರು.

ಭೀಮರಾಯನನ್ನು ಬಹು ಭ್ರಾಂತಿಗೊಳಿಸಿದ ಚೆಲುವೆಗೆ ೧೯ ವರ್ಷಗಳ ಮೇಲಾಗಿರಲಿಲ್ಲ; ಇನ್ನೊಬ್ಬಳಿಗೆ ಸುಮಾರು ೩೦ ವರ್ಷಗಳು.

ಇವರಿಬ್ಬರನ್ನೂ ಆ ಅಕ್ಕತಂಗಿಯರು ಮನೆಯೊಳಕ್ಕೆ ಕರೆದೊಯ್ದರು. ಕಿರಿಯಳು ತನಗಾಗುವ ನೋವಿನ ಬಾಧೆ ಯನ್ನು ಹೊರಳಾಡುವ ಹಾಗೂ ನರಳುವ ಮೂಲಕವಾಗಿ ವ್ಯಕ್ತಪಡಿಸಲು, ತನ್ನ ಸಂಗಡಿಗಳ ಲಕ್ಷಣವನ್ನರಿತಾ ಹಿರಿ ಯಳು ಬಲು ಬೆದರಿ ತಾರೆಲೀಲೆಯರನ್ನು ಕುರಿತು, "ಆಪದ್ಬಾಂಧವರಾದ ಸುಂದರಿಯರೇ, ನಿರ್ವಾಹವಿಲ್ಲದೆ ನಿಮ ಗಿನ್ನೂ ತೊಂದರೆಯನ್ನು ಕೊಡಬೇಕಾಗಿದೆ. ಜನಸೇವೆಯೇ ಜನಾರ್ದನನ ಸೇವೆಯೆಂದು ಬಗೆದು ಕೃಪೆಮಾಡಿರಿ. ಈ ರಮಣಿಗೊಂದು ಶಯ್ಯಾಗಾರವು ಬೇಕಾಗಿದೆ. ಅವಳ ಪ್ರಸವ ಕಾಲವೀಗ ಸಮೀಪಿಸಿತು " ಎಂದಳು.

ಇದನ್ನು ಕೇಳಿ ಭಗಿನಿಯರಿಬ್ಬರೂ ಬೆಚ್ಚಿಬಿದ್ದರು. ಮರುಕ್ಷಣದಲ್ಲಿಯೇ ಅರಿವು ಬರಲು ಸಹೃದಯರಾದಾ ರಮಣಿಯರು ಲಗುಬಗೆಯಿಂದ ಅವಳ ಬೇಡಿಕೆಯಂತೆ ನಡೆಯಲುಪಕ್ರಮಿಸಿದರು. ಅತ್ತಲವಳು ಸೇವಿಕೆಯನ್ನು ದ್ದೇಶಿಸಿ, " ಮಾಲತಿ, ಬಾಯಿಯವರನ್ನು ನೋಡಿಕೋ. ಅವರ ಮೈಯಲ್ಲೀಗ ಸ್ವಸ್ಥವಿಲ್ಲ " ಎಂದು ಹೇಳಿ ಅರ್ಥ ಪೂರ್ಣದೃಷ್ಟಿಯನ್ನತ್ತ ಚೆಲ್ಲಲು, ಸ್ವಚ್ಛವಾದ ಚಂದ್ರಿಕೆಯು

ಅದನ್ನು ವ್ಯರ್ಥವಾಗಗೊಡಲಿಲ್ಲ. ಮಾಲತಿಯು ಕ್ಷಣ ಮಾತ್ರದಲ್ಲಿ ಒಡೆಯಳ ಬಳಿಗೆ ಓಡಿದಳು.

"ಬೋರಾ, ನಿನ್ನ ಗಾಡಿ ಕುದುರೆಗಳೇ ಮೊದಲಾದುವು ಗಳನ್ನು ತೆಗೆದುಕೊಂಡು ಹೋಗು. ಬೀದಿಯಲ್ಲಾದ ಅಪ ಘಾತದ ಸುಳಿವು ಯಾರಿಗೂ ಸ್ವಲ್ಪವಾದರೂ ಸಿಗಲಾಗದು. ನೀನು ಗುಪ್ತವಾಗಿದ್ದುಕೊಂಡು ನಮ್ಮ ಅಪ್ಪಣೆಗಳನ್ನು ಸರಿಯಾಗಿ ಪಾಲಿಸುತ್ತಿರು. ನಿನ್ನ ವಿಳಾಸವನ್ನು ಪತ್ರ ಮುಖವಾಗಿ ನಮಗೆ ತಿಳಿಸು. ಯಾವ ಹೆಸರಿಗೆ ಪತ್ರ ಬರೆಯಬೇಕೆನ್ನುವಿಯೋ? ಒಳ್ಳೆಯದು. ಕಮಲಾಬಾಯಿ ಯೆಂದು ಕರೆಯುವುದಕ್ಕಡ್ಡಿಯಿಲ್ಲ. ಈ ಕೇರಿಯೂ ಮನೆಯ ನಂಬರೂ ಎಲ್ಲವೂ ತಾನಾಗಿಯೇ ತಿಳಿದುಬರುವುದು" ಎಂದು ಸೇವಕನಿಗೆ ಹೇಳಿ ಕಳಿಸಿ, ಈ ಛದ್ಮನಾಮಧಾರಿಯು ಮಂದಿರವನ್ನು ಪ್ರವೇಶಿಸಿದಳು.

ಇನ್ನು ತರುಣಯುವತಿಯ ನಿಜಸ್ಥಿತಿಯನ್ನು ಬಚ್ಚಿಡುವ ಉದ್ದೇಶದಿಂದ ಕಮಲಾಬಾಯಿಯು ತಾರೆಲೀಲೆಯರು ಕೇಳುವಂತೆ, "ಇಂದುಮತೀಬಾಯಿಯವರು ಈಗ ಹೇಗಿ ರುವರು?" ಎಂದು ಕೇಳಿದಳು. ಇದರ ಗರ್ಭಿತಾರ್ಥ ವನ್ನು ಆ ಪ್ರಮದೆಯು ತರ್ಕಿಸದಿರಲಿಲ್ಲ.

ಇಂದುಮತಿಯು ಅಕಾಲಪ್ರಸವ ಬಾಧೆಯಿಂದ ಬಹು ಬಳಲಲು, ಕಮಲೆಯು ತಾರೆಯನ್ನು ಕರೆದು ವೈದ್ಯನೊಬ್ಬ ನನ್ನು ಕರೆತಾರೆಂದು ಹೇಳಿದಳು. ತಾರೆಯು ತ್ವರಿತಗತಿ ಯಿಂದತ್ತ ನಡೆಯಲು, ಲೀಲೆಯೂ ಹೊರಗೆ ಬಂದು ನಡು ಮನೆಯಲ್ಲಿ ಅಕ್ಕನ ಬರುವಿಕೆಯನ್ನೆದುರುನೋಡಲಾರಂಭಿ ಸಿದಳು.

ತಾರೆಯು ಕರೆತಂದ ವೈದ್ಯನಿಗೆ ಸುಮಾರು ೪೦ ವರ್ಷವಾಗಿತ್ತು. ಅವನು ಮಿತಭಾಷಿಯೂ ತನಗೆ ಸಂಬಂಧಿಸದ ವಿಷಯದಲ್ಲಿ ಕೌತುಕಕ್ಕಧೀನನಾಗಿ ಪ್ರಶ್ನಿಸದ ಸ್ವಭಾವದವನೂ ಆಗಿದ್ದನು. ಆದರೆ ಅವನು ಸ್ವಾರ್ಥಪರನೂ ಯಾವಾಗಲೂ ಗಳಿಕೆಯ ಹಾದಿಯನ್ನು ಹುಡುಕುವವನೂ ಆಗಿದ್ದನು. ಇವನ ಪತ್ನಿಯೂ ಇವನಂತೆಯೇ ಇದ್ದಳು. ದುಡಿಮೆಯು ಚೆನ್ನಾಗಿದ್ದರೂ ಇವನಿಗೆ ಮಕ್ಕಳಾರೂ ಇರಲಿಲ್ಲ.

ವೈದ್ಯ ಧುಂಡೀರಾಜನು ಇಂದುಮತಿಯಿದ್ದಲ್ಲಿಗೆ ಹೋದ ನಂತರ ತಂಗಿಯ ಬಳಿಗೆ ತಾರೆಯು ಬಂದಳು. ಆಗ ಲೀಲೆಯು—

"ಈ ಸುಂದರಿಯರು ಅಪೂರ್ವಾಲ್ಯಾಭರಣಗಳಿಂದ ಭೂಷಿತರಾಗಿರುವುದರಿಂದ ಶ್ರೇಷ್ಠ ಮನೆತನದವರಂತಿದೆ. ಸೇವಕ ಸೇವಿಕೆಯರೂ ನಾಲ್ಕು ಕುದುರೆಯ ಗಾಡಿಯೂ ಧರಿಸಿರುವ ಪೀತಾಂಬರವೂ ನಮ್ಮನ್ನು ಬೆರಗುಗೊಳಿಸುತ್ತಿವೆ" ಎಂದೆನ್ನಲು, ತಾರೆಯು "ಅಹುದು, ನನಗೂ ಹಾಗೆಯೇ ತೋರುತ್ತಿದೆ. ನಿಜವಾಗಿ ನಾನು ಭಾವಿಸಿರುವುದೇನೆಂದರೆ ಇವರಾರೋ ದೊಡ್ಡ ಪದವಿಯಲ್ಲಿರುವವರು; ಕಾರಣಾಂತರದಿಂದ ಗುಪ್ತರೀತಿಯಲ್ಲಿ ಸಂಚರಿಸುತ್ತಿದ್ದಾರೆ. ಹೀಗಾಗುತ್ತಿರುವುದೂ ಉಂಟು, ಅಲ್ಲವೇ?" ಎಂದು ಕೇಳುವುದರೊಳಗಾಗಿ ಕಮಲೆಯು ಕೋಣೆಯಿಂದ ನಡೆತಂದು "ನವೀನ ಸಖಿಯರೇ, ನನ್ನ ಪ್ರಾಣಮಿತ್ರಳಾದ ಇಂದುಮತಿಯ ವಿಷಯದಲ್ಲಿ ನೀವು ತೋರಿದ ಕರುಣೆಗಾಗಿ ನಿಮ್ಮುಪಕಾರಗಳನ್ನು ಸಂಪೂರ್ಣವಾಗಿ ಸ್ಮರಿಸುವುದೆಂತೋ ನಾನರಿಯೆನು. ನಿಮ್ಮ ಔದಾರ್ಯವು ನುಡಿಗೆ ನಿಲುಕದಂತಹುದು. ಆದರಿಷ್ಟುಮಾತ್ರ

ನಿಜ—ಇದನ್ನು ಅನ್ಯಥಾ ಭಾವಿಸಬೇಡಿರಿ—ನಿಮ್ಮ ಪ್ರಯಾಸಕ್ಕೆ ಪ್ರತಿಫಲವುಂಟು " ಎಂದಳು. " ಬಾಯಿಯವರೇ, ನಾವು ಬಡವರಾದರೂ ವರ್ತಕತನವು ನಮ್ಮಲ್ಲಿಲ್ಲ—" ಎಂದು ತಾರೆಯು ನುಡಿಯುವುದರೊಳಗಾಗಿ, ಕಮಲೆಯು " ಪ್ರಿಯೆ, ನನಗದು ಗೊತ್ತಿದೆ. ವ್ಯಾಪಾರರೂಪವಾಗಲ್ಲದಿದ್ದರೂ ಬೇರೊಂದು ಪರಿಯಲ್ಲಿ ಸಂಭಾವನೆಯನ್ನು ಸಲ್ಲಿಸಲು ಸಾಧ್ಯವಿದೆ. ಇದರಿಂದ ಒಬ್ಬರ ಕೃತಜ್ಞತೆಯು ವ್ಯಕ್ತವಾಗುವುದೇ ಹೊರತು ಮತ್ತೊಬ್ಬರಿಗಾವ ಕಳಂಕವೂ ಉಂಟಾಗದು. ಈಗಾ ಮಾತು ಬೇಡ; ಏಕೆಂದರೆ ನಿಮ್ಮಲ್ಲಿ ನನ್ನದಿನ್ನೊಂದು ಬೇಡಿಕೆಯಿದೆ—" ಎಂದು ಸಾವಧಾನದಿಂದ ಬಿನ್ನೈಸಲು, ತಾರೆಯು "ಹೇಳಿ, ಶ್ರೀಮಂತರೇ ಹೇಳಿ. ನಿಮಗಾಗಿ ಬಹು ಸಂತೋಷದಿಂದ ನಾವೇನು ಬೇಕಾದರೂ ಮಾಡುವೆವು " ಎಂದುಸುರಿದಳು.

" ಹಾಗಾದರೆ ನಮ್ಮ ಮಾಲತಿಗೆ ವೈದ್ಯನ ಮನೆಯ ದಾರಿಯನ್ನು ತೋರಬೇಕು. ವೈದ್ಯನೀಗ ಮನೆಗೆ ಹೋಗುವಂತಿಲ್ಲವಾದುದರಿಂದ ತನ್ನ ಪತ್ನಿಗೊಂದು ಪತ್ರವನ್ನು ಬರೆದಿದ್ದಾನೆ. ಅತ್ಯವಶ್ಯವಾದ ಕೆಲವು ಸಾಮಗ್ರಿಗಳೀಗ ಬೇಕಾಗಿವೆಯಂತೆ. ಮಾಲತಿಗಾ ಮನೆಯು ಗೊತ್ತಿಲ್ಲವಾದುದರಿಂದಲೂ ಇಂತಹ ಅತಿ ಶೀತಳ ಅಪರಾತ್ರಿಯಲ್ಲಿ ಏಕಾಕಿಯಾಗಿ ನೀವು ಹೋಗುವುದು...." ಎಂಬ ಮಾತನ್ನು ಮುಗಿಯಗೊಡದೆ, "ಹಾಗಾದರೆ ಮಾಲತಿಯು ನನ್ನೊಡನೆ ಬರಲಿ. ಕಾಲಹರಣದಿಂದ ಕಾರ್ಯಹಾನಿಯಾದೀತು" ಎಂದು ತಾರೆಯು ಮೇಲಕ್ಕೆದ್ದಳು.

ಮಾಲತಿಯು ೨೫ ವರ್ಷದ ಸರಾಸರಿ ಸುಂದರಿಯು,

ಅವಳು ಬಹು ಚುರುಕು, ಜತನ, ಹಾಗೂ ಅಲ್ಪಸಲ್ಲಾಪದ ಸ್ವಭಾವದವಳಾಗಿದ್ದಳಲ್ಲದೆ ವಿದ್ಯಾವಂತಳೂ ನಡೆನುಡಿ ಜಾಣೆಯೂ ಆಗಿದ್ದಳು.

ಜನನಕಾಲದಲ್ಲಿ ಅತಿಗುಪ್ತರಾಗಿರತಕ್ಕ ಕುಲೀನ ಕೋಮಲಿಯರನ್ನು ಬರಮಾಡಿಕೊಳ್ಳುವ ಪರಿಪಾಠವು ಈ ವೈದ್ಯದಂಪತಿಗಳಿಗೆ ಬಿದ್ದಿತ್ತು. ಪ್ರಸವಕಾಲದಲ್ಲುಪಯೋಗಿಸುವ ಬಟ್ಟೆಬರೆಗಳೇ ಮೊದಲಾದುವು ಅವರಲ್ಲಾವಾಗಲೂ ಸಿದ್ಧವಾಗಿರುತ್ತಿದ್ದುವು. ಇದಕ್ಕಾಗಿಯೇ ಮಾಲತಿಯಿಲ್ಲಿಗೆ ಕಳುಹಲ್ಪಟ್ಟಿದ್ದಳು. ಇಂತಹ ವ್ಯಾಪಾರದಲ್ಲಿ ಅತ್ಯಂತಲಾಭವಿದ್ದುದರಿಂದಲೂ ಪತಿಯ ಪತ್ರದ ಮೇಲಿಂದ ಇದು ಇನ್ನೂ ಲಾಭಕರವೆಂದು ಕಂಡುಬಂದುದರಿಂದಲೂ ಹಣಕ್ಕಾಗಿ ಹೆಣವಾಗಬಲ್ಲ ಆ ಚತುರಳು ಅಂತಹ ಅವೇಳೆಯಲ್ಲಿ ಬೆಚ್ಚಗಿನ ಹಾಸಿಗೆಯಿಂದೇಳಲು ಅಸಂತೋಷವುಳ್ಳವಳಾಗಲಿಲ್ಲ.

ಬೇಕಾದುದೆಲ್ಲವನ್ನೂ ವೈದ್ಯಪತ್ನಿಯು ಕೂಡಲೇ ಗಂಟುಕಟ್ಟಿ ಕೊಡಲು, ಅದನ್ನು ತೆಗೆದುಕೊಂಡು ಮಾಲತಿಯು ಹಿಂದಿರುಗಿ ಬಂದಳು.

ತಾಯಿತನವನ್ನೈದುತ್ತಿದ್ದ ರಮಣೀಮಣಿಗೆ ೧೯ ವರ್ಷಗಳಿರಬಹುದೆಂದು ಹಿಂದೆಯೇ ಹೇಳಿದ್ದೇವೆ. ಇವಳು ಸೌಂದರ್ಯದಲ್ಲಿ ಸೌಂದರ್ಯದಧಿದೇವತೆಯನ್ನು ಮೆಚ್ಚಿಸಿದ್ದಳು. ಕಮಲೆಯೂ ಸಹ ಇಂಥವಳ ಒಡನಾಡಿಯಾಗಿರಲೊಪ್ಪುವಂತಿದ್ದಳು.

ಶಯ್ಯಾಗಾರದಲ್ಲಿದ್ದಾ ವೈದ್ಯನ ಸೂಕ್ಷ್ಮದೃಷ್ಟಿಯು ಪ್ರಸವಿಸುವ ಇಂದುಮತಿಯ ಕೊರಳಿನಲ್ಲಿ ಮಂಗಲಸೂತ್ರವಿಲ್ಲದುದನ್ನೂ ಕಮಲಾಬಾಯಿಯ ಕಂಠದಲ್ಲಿ ಅದಿರುವುದನ್ನೂ

ಕಂಡುಹಿಡಿಯದಿರಲಿಲ್ಲ. ಅನರ್ಘ್ಯರತ್ನಗಳ ಕಾಂತಿಯಿಂದ ಕಳೆಯೇರಿದ ಕಾಂತೆಯರು ಯೋಗ್ಯ ಬಹುಮಾನವನ್ನು ಕೊಡುವರೆಂಬಾಸೆಯಿಂದ ಹರ್ಷಿತನಾದ ಧುಂಡೀರಾಜನಿಗದು ಮಹತ್ವವೆನಿಸಲಿಲ್ಲ.

ಇಷ್ಟರಲ್ಲಿ ಮಾಲತಿಯು ಮರಳಿ ಬಂದಳು. ಅದು ಯೋಗ್ಯಸಮಯವಾಗಿತ್ತು—ಏಕೆಂದರೆ ಮುಂದೆ ಅತ್ಯಲ್ಪ ಕಾಲದಲ್ಲಿಯೇ ಇಂದುಮತಿಯು ಗಂಡುಮಗುವಿನ ತಾಯಿ ಯಾಗಿಬಿಟ್ಟಳು.

ಮುಂದಿನ ಪರಿಚ್ಛೇದವಾವುದೆಂಬುದನ್ನು ಧುಂಡೀ ರಾಜನು ಕೂಡಲೇ ಕಂಡುಹಿಡಿದನು. ಕಾರ್ಯವಿನ್ನೂ ಗೂಢತರವಾದುದರಿಂದ ರಮಣಿಯರು ಮಾತನ್ನೆತ್ತಿದಾಗ ತಾನೇನು ಹೇಳಬೇಕೆಂಬುದನ್ನು ಪತ್ನಿಯೊಡನೆ ನಿರ್ಧರಿಸಲು ಮನೆಗೆ ನಿಧಾನವಾಗಿ ನಡೆದನು. ಆಗ ಬೆಳಗುಮುಂಜಾವಿನ ಮೂರು ಗಂಟೆಯಾಗಿತ್ತು.

---

# ಧರ್ಮರಾಯನ ವೇಷದ ದುರ್ಯೋಧನನು

ವಿಜಯನಗರದಲ್ಲಿ ನಮ್ಮ ಕೃಷ್ಣರಾಯನು ರಾಜ್ಯವಾಳು ತ್ತಿದ್ದ ಕಾಲವದು. ಜ್ಯೇಷ್ಠರಾಜಪುತ್ರನಾದ ರಘುರಾಯನು ಪ್ರಾಯದ ಶಿಖರವನ್ನೇರಿದ್ದನು. ಇವನಿಗಾಗ ಮೂವತ್ತು ಮೂರು ವರುಷಗಳು.

ಸಚಿವ ಶ್ರೇಷ್ಠರೆಲ್ಲರೂ ದುಡ್ಡುದುಡ್ಡೆಂದು ಹೆಣಗುತ್ತಿ ದ್ದರು; ಏಕೆಂದರೆ ಕಲಬುರ್ಗಿಯವರೊಡನೆ ದೊಡ್ಡಯುದ್ಧ

ವೊಂದನ್ನು ಹೂಡಬೇಕಾಗಿತ್ತು. ಸಹಗಮನಪದ್ಧತಿಯು ಸರಿಯಲ್ಲವೆಂದು ಕೆಲವರೂ, ಶಿಕ್ಷಣಪದ್ಧತಿಯನ್ನು ಬದಲಿಸಬೇಕೆಂದು ಕೆಲವರೂ, ಗುಲಾಮರ ವ್ಯಾಪಾರಿಗಳನ್ನು ಗಡೀಪಾರುಮಾಡಬೇಕೆಂದು ಕೆಲವರೂ ವಿಚಾರಕ್ರಾಂತಿಯುಳ್ಳವರಾಗಿದ್ದರು. ಮಾಳವದ ರಾಜಪುತ್ರಿಯಾದ ವಿಮಲೆಯನ್ನು ರಘುರಾಯನಿಗೆ ಕೊಟ್ಟು ವಿವಾಹವಾಗುವುದೆಂದು ಎಲ್ಲೆಲ್ಲಿಯೂ ಪ್ರಸಿದ್ಧಿಸಲ್ಪಟ್ಟಿತ್ತು.

ದೇಶದ ಪರಿಸ್ಥಿತಿಯು ಇಂತಿರುವಾಗ ಮುಂಬುಮುಸುಕಿದೊಂದು ಸಂಜೆಯ ಸಮಯದಲ್ಲಿ ಇಂದ್ರಭವನವೆಂಬ ಭೋಜನಾಲಯದಲ್ಲಿ ಕೆಲವು ವೈಶ್ಯಪ್ರಯಾಣಿಕರು ನೆರೆದಿದ್ದರು. ಈ ಭೋಜನಾಲಯವು ವಿಜಯನಗರದ ವೀರಪುರವೆಂಬ ಭಾಗದಲ್ಲಿತ್ತು. ಅವರಲ್ಲಿ ಕೆಲವರು ಅದೇ ರಾತ್ರಿಯಲ್ಲಿಯೇ ಹೋಗುವವರಿದ್ದರು; ಇನ್ನು ಕೆಲವರು ದೂರಪ್ರವಾಸದಿಂದಾದ ಪ್ರಯಾಸವನ್ನು ಪರಿಹರಿಸಿಕೊಳ್ಳುತ್ತಿದ್ದರು. ಅವರೆಲ್ಲರೂ ಮೇಲಿಂದಮೇಲೆ ಬೇರೆ ಬೇರೆ ಭೋಜನಾಲಯಗಳಲ್ಲಿಯೂ ಒಂದುಗೂಡುತ್ತಿದ್ದ ಕಾರಣದಿಂದ ಪರಿಚಿತರಾಗಿದ್ದರು. ವ್ಯಾಪಾರೋದ್ದೇಶದಿಂದ ತಿರುಗುತ್ತಿರುವುದೇ ಅವರ ಕೆಲಸವೆಂದು ಮತ್ತೆ ಹೇಳುವ ಕಾರಣವಿಲ್ಲ. ಮಾತಿನಲ್ಲಿಯೇ ಮೆಚ್ಚಿಗೆಯನ್ನು ಪಡೆಯಬಲ್ಲ ವೈಶ್ಯಪ್ರವಾಸಕರು ಅಪರಿಚಿತರನ್ನು ಸಹ ಕೆಲಹೊತ್ತಿನಲ್ಲಿಯೇ ತಮ್ಮವರನ್ನಾಗಿಸುತ್ತಿದ್ದರು. ಅವರರಿಯದ ಸಂಗತಿಗಳಿಲ್ಲ; ಅವರು ಚರ್ಚಿಸದ ವಿಷಯವಿಲ್ಲ.

ನಮ್ಮ ಕಥಾನಕವು ನಡೆದ ಸಾಯಂಕಾಲದ ಆರೇಳು ಗಂಟೆಗಳ ನಡುವೆ ಈ ಪ್ರವಾಸಿಕರಾವುದೋ ರಾಜಕೀಯ ವಿಷಯ

ವಿಮರ್ಶೆಯಲ್ಲಿ ಮಗ್ನರಾಗಿರುವಾಗ ಹೊರಬಾಗಿಲು ತೆರಿದಿತು. ಎಲ್ಲರ ದೃಷ್ಟಿಗಳೂ ಅತ್ತ ತಿರುಗಿದುವು. ನಿಲುವಂಗಿ ಯಿಂದಾಚ್ಛಾದಿತನಾದ ಗಿಡ್ಡನೊಬ್ಬನು ಠೀವಿಯಿಂದವರ ಬಳಿಗೆ ಬಂದನು. ಎಲ್ಲರಿಗೂ ಆನಂದವುಕ್ಕಿತು. "ವೀರಪ್ಪಾ, ನೀನೂ ಬಂದುಬಿಟ್ಟಿಯಾ? ಕುಶಲವಷ್ಟೇ?" ಇತ್ಯಾದಿ ಪ್ರಶ್ನೆ ಗಳ ಸುರಿಮಳೆಯಿಂದ ಇಂದ್ರಭವನವು ಪ್ರತಿಧ್ವನಿತ ವಾಯಿತು.

"ಅಹುದು, ನಾನೂ ಬಂದೆ. ಎಂದಿನಂತೆಯೇ ಕುಶಲ. ಆದರೀಗ ಹಸಿದ ತೋಳವಾಗಿದ್ದೇನೆ" ಎಂದವನೊರೆದನು. ಬದಿಯಲ್ಲಿದ್ದವನೊಬ್ಬನು "ಭೋಜನಕ್ಕೇಳುವವರೆಗೂ ಮಾತನಾಡಬಹುದಷ್ಟೇ; ದಣಿವಾರುವವರೆಗೆ ಆಹಾರವು ರುಚಿಸುವುದಿಲ್ಲ. ನೀವು ಬಂದುದೆಲ್ಲಿಂದ?" ಎಂದನು. "ನಿನ್ನೆ ನಿದ್ರೈಗೈದುದು ವಿಜಯಪುರದಲ್ಲಿ; ಇಲ್ಲಿಗಾಗಿ ಹೊರ ಟುದು ಈ ಬೆಳಗಿನ ಒಂಬತ್ತು ಗಂಟೆಗೆ. ನಾಲ್ವತ್ತು ಮೈಲಿಗಳ ಪ್ರವಾಸವು ತಾತ್ಸಾರಾರ್ಹವಲ್ಲ. ನಾನೀಗ ನಾಲ್ಕು ತಿಂಗಳಿ ನಿಂದಲೂ ಸ್ವಲ್ಪವೂ ಸೋಮಾರಿಯಾಗಿಲ್ಲ. ಇಡೀ ಹಿಂದುಸ್ಥಾನದಲ್ಲಿ ನನಗಪರಿಚಿತವಾದ ಭಾಗವಾವುದೂ ಇಲ್ಲ. ನಾನು ನಾಳಿನ ಬೆಳಗಿನಲ್ಲಿ ದುರಗೀ ಓಣಿಯಲ್ಲಿಯ ನವು ವರ್ತಕಧನಿಗಳನ್ನು ಸಂದರ್ಶಿಸುವೆನು. ಸುಪ್ರಸಿದ್ಧ ಶೇಷಯ್ಯಶೆಟ್ಟರ ಹಾಗೂ ಸುಬ್ರಾಯಶೆಟ್ಟರ ಹೆಸರುಗಳನ್ನು ನೀವು ಕೇಳಿರಬಹುದು. ನನ್ನ ಕೆಲಸವನ್ನೂ ತಂದಿರುವ ದ್ರವ್ಯವನ್ನೂ ಅವರರಿತರೆ ಸುಪ್ರೀತರಾಗುವರು" ಎಂದು ವೀರಪ್ಪನು ಹೇಳಿದನು. ಅಷ್ಟರಲ್ಲೊಬ್ಬನು "ವಿಜಯ ಪುರದ ಸಮಾಚಾರವೇನು? ಆ ಪ್ರದೇಶವು ನನಗೆ ಪರಿಚಿತ

ವಾಡುದು" ಎನ್ನಲು, "ಹಾಗಾದರೆ ಮೃತ್ಯುಂಜಯ ರಾಯರ ಗುರುತು ನಿಮಗಿರಲೇ ಬೇಕಷ್ಟೆ?" ಎಂದು ಅತ್ಯುತ್ಸು ಕನಾಗಿ ವೀರಪ್ಪನವನನ್ನು ಕೇಳಿದನು. ಆಳುವ ದೊರೆಗಳ ವರನ್ನು ಪ್ರತ್ಯಕ್ಷವಾಗಿ ನೋಡಿರದಿದ್ದರೂ ಅವರಿಗೆ ಸಂಬಂಧಿ ಸಿದುದೆಲ್ಲವನ್ನೂ ವಿವರವಾಗಿ ತಿಳಿದಿರುವುದು ಸಹಜವಾಗಿ ರುವಂತೆ ಮೃತ್ಯುಂಜಯನಿಗೆ ಅಲ್ಲಿದ್ದವರೆಲ್ಲರೂ ಪರಿಚಿತರಲ್ಲ ದಿದ್ದರೂ ಅವನ ವಿಷಯವನ್ನರಿಯದವರಲ್ಲಿರಲಿಲ್ಲ. ಮೊದಲು ಪ್ರಶ್ನಿಸಿದಾ ವ್ಯಕ್ತಿಯು ಕೇಳಿಬಲ್ಲೆನೆಂದು ಉತ್ತರಕೊಡಲು ವೀರಪ್ಪನು ಕೇಳಿದನು, "ಅವನು ಸಜ್ಜನನೆಂದೂ ಬಹು ಹಣವಂತನೆಂದೂ ತನ್ನ ಪತ್ನಿಯಲ್ಲಿ ಅತ್ಯನುರಕ್ತನಾಗಿದ್ದ ನೆಂದೂ ನಿಮ್ಮ ಭಾವನೆಯಷ್ಟೇ?" "ಅಹುದು, ನಾವೆಲ್ಲರೂ ಇದೇ ಅಭಿಪ್ರಾಯದವರು. ಅವನಿರುವ ಗ್ರಾಮವು ವಿಜಯಪು ರಕ್ಕೆ ಮೂರು ಮೈಲಿಗಳ ದೂರದಲ್ಲಿದೆ. ವಿಜಯಪುರದಲ್ಲಿ ಅವ ನನ್ನು ಹೊಗಳದವರೆ ಇಲ್ಲ. ದಾನಧರ್ಮಗಳಿಂದ ತೃಪ್ತಿ ಹೊಂದದ ದರಿದ್ರರಿಲ್ಲ. ಇವನಿಂದ ಏಳಿಗೆಯನ್ನು ಹೊಂದದ ಅಂಗಡಿಕಾರರಿಲ್ಲ. 'ದುರ್ಜಯ ಮತ್ತು ನಾಗಶೆಟ್ಟಿ ಬ್ಯಾಂಕಿ'ನಲ್ಲಿ ಇವನದೊಂದು ದೊಡ್ಡ ಪಾಲಿದೆ. ಒಕ್ಕಲಿ ಗರೂ ರೈತರೂ ಈ ಬ್ಯಾಂಕಿನಿಂದಲೇ ಮುಂದೆ ಬರುತ್ತಿ ದ್ದಾರೆ" ಎಂದುತ್ತರ ಬರಲು, ವೀರಪ್ಪನು ಭ್ರಾಂತನಾಗಿ "ಅಯ್ಯೋ ದೇವರೇ ಇದು ವಿಚಿತ್ರವಲ್ಲವೇ. ಹೊರ ನೋಟಕ್ಕೆ ಮರುಳಾಗಿ ಪ್ರಪಂಚವೇ ಮೋಸಹೋಗಿರಬಹುದ ಲ್ಲವೇ? ಸಂಪೂರ್ಣ ಪಿಶಾಚಹೃದಯವುಳ್ಳವನಾದರೂ ನೋಡುವುದಕ್ಕೆ ಸಾಧುವೆನಿಸಿ ಅನೇಕ ವರುಷಗಳವರೆಗೆ, ಮೆರೆಯಲಾಗುವುದಲ್ಲವೇ" ಎಂದಾಶ್ಚರ್ಯಪಡಲು

"ಮೃತ್ಯುಂಜಯನಿಗೂ ಇದಕ್ಕೂ ಇರುವ ಬಾದರಾಯಣ ಸಂಬಂಧವೇನು?" ಎಂದು ಎಲ್ಲರೂ ಶಂಕಿತರಾಗಿ ಕೂಗಿ ಕೊಂಡರು.

ವೀರಪ್ಪನೂ ಒದರಿದನು- "ಅವನಿಗಿದರ ಸಂಬಂಧವೇನು? ಇದೇ ಸಂಬಂಧ—ನಾನು ವಿಜಯಪುರದ ಭೋಜನಾಲಯ ದಲ್ಲಿಳಿದಾಗ ಇಡೀ ಪಟ್ಟಣವೇ ಗಂಡಾಂತರಕ್ಕೀಡಾದಂತಿತ್ತು. ಎಲ್ಲರೂ ಅಲ್ಲಿ ಮಾತನಾಡುವವರೇ. ಇವನ ಅಪರಾಧ ಪರಂಪರೆಗಳ...." ಎನ್ನುವುದರೊಳಗಾಗಿ, "ಏನು, ಅಪ ರಾಧಪರಂಪರೆಗಳೇ?" ಎಂದು ಪ್ರತಿಧ್ವನಿತವಾಯಿತು.

"ಅಹುದು, ಅನೇಕ ಅಪರಾಧಗಳು. ಈ ಸುಪ್ರಸಿದ್ಧ ಸಜ್ಜನನನ್ನು ಎಲ್ಲರೂ ಬಲ್ಲಿರಷ್ಟೇ?"

"ಬಲ್ಲೆವು, ಅವನು ಮಾಡಿದುದೇನು?"

"ಅವನು ಮಾಡದಿರುವುದೇನೆಂದು ಬೇಕಾದರೆ ಕೇಳಿರಿ. ಏಕೆಂದರೆ ಮಾಡಬಹುದಾದ ಅಪರಾಧಗಳನ್ನೆಲ್ಲಾ ಅವನು ಮಾಡಿರುವನು—ಮೋಸ, ಮನೆಸುಡುವುದು, ಕಳ್ಳಕೈ ಬರೆಹ (forgery), ಕೊಲೆ...."

"ದೇವರೇ ಗತಿ! ಅದು ಹೇಗಾಯಿತು?" ಎಂದೊಬ್ಬನೂ, "ಎಲ್ಲಾ ಅಪರಾಧಗಳನ್ನೂ ಅವನೇ ಮಾಡಿದನೇ?" ಎಂದು ಮತ್ತೊಬ್ಬನೂ, "ಒಬ್ಬನೇ ಮಾಡಲಸಾಧ್ಯವೆ"ಂದಿನ್ನೊ ಬ್ಬನೂ, "ಇದು ಅಸಂಭವ"ವೆಂದು ಮಗುದೊಬ್ಬನೂ ಚಕಿತರಾಗಿ ನುಡಿದರು.

"ನಾಳಿನ ವರ್ತಮಾನಪತ್ರದಿಂದ ನಿಮ್ಮ ಸಂಶಯ ನಿವಾ ರಣೆಯಾಗುವುದು. ಅವನು ಎಲ್ಲ ವರ್ತಕರನ್ನೂ ವಶಪಡಿಸಿ ಕೊಂಡು, ತನ್ನ ಪಾಲಿರುವ ಬ್ಯಾಂಕಿನಲ್ಲಿ ಕಳ್ಳ ಕೈಬರೆಹ

ಗಳನ್ನು ವಿಪರೀತವಾಗಿ ಮಾಡಿ ಸುಂದರಿಯಾದ ಹೆಂಡತಿಯನ್ನು ಕೊಂದು, ಹಳ್ಳಿಯಲ್ಲಿಯ ತನ್ನ ಉತ್ಕೃಷ್ಟವಾದ ಮನೆಗೆ ಬೆಂಕಿಯಿಟ್ಟನು."

"ಅಯ್ಯೋ! ಅಯ್ಯೋ!!"

"ಭಯಂಕರ ಅಪರಾಧಪರಂಪರೆಗಳು ಇದಕ್ಕೂ ಹೆಚ್ಚು ನನಗೆ ತಿಳಿದುಬರಲಿಲ್ಲ. ಅಲ್ಲಿಯ ಸುದ್ದಿಗಾರರೆಲ್ಲರೂ ಏಕಕಾಲದಲ್ಲಿ ನುಡಿಯುತ್ತಿದ್ದರಲ್ಲದೆ, ಒಬ್ಬರು ಹೇಳಿದ್ದರ ವಿರುದ್ಧವಾಗಿ ಮತ್ತೊಬ್ಬರು ಹೇಳುತ್ತಿದ್ದರು. ಇದರಿಂದ ಬಹು ಗೊಂದಲವೆದ್ದಿತು. ನಾಗರೆಡ್ಡಿಯು ಊರಿನಲ್ಲಿಲ್ಲದಾಗ ದುರ್ಜಯನು ಬ್ಯಾಂಕಿನ ವಿಚಾರಣೆಯನ್ನು ನಡೆಸಬೇಕಾಯಿತು. ಆ ಮೃತ್ಯುಂಜಯನ ಅನೇಕ ಕಳ್ಳ ಕೈಬರೆಹಗಳು ಕಂಡುಬರಲು ಅವನಾಗ ಕೂಡಲೇ ಮೃತ್ಯುಂಜಯನ ಮನೆಗೆ ಹೋಗಿ, ಅವನು ಅಲ್ಲಿರಲಿಲ್ಲವಾದುದರಿಂದ ಎಲ್ಲವನ್ನೂ ಅವನರಸಿಯಾದ ಸರಸೆಗರುಹಿದನು. ಕೆಲಕಾಲದ ನಂತರ ಮೃತ್ಯುಂಜಯನು ಮನೆಗೆ ಬರಲು ಸರಸೆಯು ಅವನಿಗೆ ಬುದ್ಧಿಯನ್ನು ಹೇಳಿದಳು. ಮೃತ್ಯುಂಜಯನು ಎಲ್ಲವೂ ಅವಳಿಗೆ ತಿಳಿದುದರಿಂದ ಮಾನಹಾನಿಯಾಯಿತೆಂದು ಭಾವಿಸಿ ಭ್ರಾಂತನಾದನು. ಅಷ್ಟರಲ್ಲಿ ದುರ್ಜಯನಲ್ಲಿಗೆ ಬರಲು ಅವನನ್ನು ಮನೆಯಿಂದಟ್ಟಿ, ಹೆಂಡತಿಯನ್ನು ಕೊಂದು, ಅದನ್ನು ಬಚ್ಚಿಡಲು ಮನೆಗೆ ಬೆಂಕಿಯಿಟ್ಟು, ತಾನು ತಲೆತಪ್ಪಿಸಿಕೊಂಡು ಓಡಿಹೋಗಿರುವನು."

"ಅವನು ರಾಕ್ಷಸನ ಪೂರ್ಣಾವತಾರವಾಗಿರಬೇಕು. ಇದು ನಿಜ. ನಾನು ಬ್ಯಾಂಕಿನಲ್ಲಿ ದುರ್ಜಯನನ್ನು ನೋಡಿದ್ದೆನು. ೩೮-೩೯ ವಯಸ್ಸಿನ ಆ ಸದ್ಗೃಹಸ್ಥನು ನಮ್ರಸ್ವಭಾವ

ದವನು. ತನ್ನ ತಂದೆಯು ಕಾಲವಾದನಂತರ ಬ್ಯಾಂಕಿನ ಒಡೆತನದಲ್ಲಿ ಇವನೂ ಕೈಹಾಕಬೇಕಾಯಿತು " ಎಂದೊಬ್ಬನೂ, "ಮೃತ್ಯುಂಜಯನನ್ನು ಹಿಡಿದುಕೊಟ್ಟವರಿಗೆ ಸಂಭಾವನೆಯು ಸಿಕ್ಕಬಹುದಲ್ಲವೇ?" ಎಂದೊಬ್ಬನೂ ನುಡಿದರು.

"ಸಿಕ್ಕೇ ಸಿಗುವುದು. ಹೆಚ್ಚಿನ ವಿವರವನ್ನು ಪ್ರಸಿದ್ಧಿಸಲಾಗುವುದು" ಎಂದು ವೀರಪ್ಪನೆನ್ನಲು, "ಅವರನ್ನು ನೀವು ನೋಡಿರುವಿರೋ?" ಎಂದೊಬ್ಬನು ಕೇಳಿದನು.

"ಎರಡು ಮೂರು ಸಲ ನೋಡಿದ್ದೇನೆ. ರಾಜವಂಶೀಯರ ಹೋಲಿಕೆಯು ಅವನಲ್ಲಿದೆ. ಕೃಷ್ಣರಾಯರು ಚಿಕ್ಕವರಿದ್ದಾಗ ವಿಚಿತ್ರ ರೀತಿಯಲ್ಲಿ ಮನೋರಮೆ...."

ಇಷ್ಟರಲ್ಲಿ ಭೋಜನಾಲಯದವರು ವೀರಪ್ಪನನ್ನು ಊಟಕ್ಕೆ ಕರೆದೊಯ್ದರು. ಊರುಗಳಿಗೆ ಹೋಗತಕ್ಕವರೆಲ್ಲರೂ ರಾತ್ರಿಯಾದುದರಿಂದ ಅವಸರದಿಂದ ಕ್ರಮೇಣ ಹೊರಟುಹೋದರು. ೧೦-೧೨ ಜನರಲ್ಲಿ ಊಟವಾದನಂತರ ವೀರಪ್ಪನೊಡನೆ ಹೊತ್ತುಗಳೆಯಲು ಇಬ್ಬರೆ ಉಳಿದಿದ್ದರು. ಅವರಲ್ಲೊಬ್ಬನು ಮಾತಿನ ಸಂದರ್ಭವನ್ನು ಜ್ಞಾಪಿಸಲು, ವೀರಪ್ಪನು ಹೇಳಿದನು "ಮನೋರಮೆಗೂ ಅವರಿಗೂ ಸಂಬಂಧವಿತ್ತು. ಗುಪ್ತರೀತಿಯಲ್ಲಿ ವಿವಾಹವಾಗಿತ್ತೆಂದು ಕೆಲವರೂ ಗಂಡುಮಗುವು ಜನಿಸಿತ್ತೆಂದು ಕೆಲವರೂ ಹೇಳುವರು. ತನ್ನ ಮಗುವೊಂದು ಆ ಕಾಲದಲ್ಲಿಯೇ ತೀರಿಕೊಳ್ಳಲು ಮೃತ್ಯುಂಜಯನ ತಂದೆಯು ಈ ಮಗುವನ್ನು ಗುಪ್ತವಾಗಿ ಸಾಗಿಸಿ ಸಾಕಿಕೊಂಡನು. ಇದೆಲ್ಲವನ್ನೂ ನಾ ವಿಜಯಪುರದಲ್ಲರಿತೆನು. ಆದರೂ ಇದೆಲ್ಲವೂ ಸತ್ಯವೇ

ಹೇಳಲಾರೆನು. ”

“ ಅಹುದು, ನಾನೂ ಹಾಗೆ ಹೇಳಲಾರೆನು ” ಎಂದೊಬ್ಬ ವ್ಯಕ್ತಿಯು ನುಡಿದು ಇವರ ಬಳಿಗೆ ಬಂದಿತು. ಮೇಲಿನ ಸಂಭಾಷಣೆಯ ಕೊನೆಯಭಾಗವನ್ನವನು ಕೇಳಿದಂತಿತ್ತು.

ಆ ವ್ಯಕ್ತಿಯು ಮನೋಹರನೂ ಗಂಭಿರನೂ ದರ್ಪವುಳ್ಳವನೂ ಆಗಿದ್ದನು. ಆವನ ಕುಲೀನತೆಯನ್ನೂ ಜಾಣತನವನ್ನೂ ಅಧಿಕಾರವನ್ನೂ ಕಣ್ಣುಗಳೇ ವ್ಯಕ್ತಗೊಳಿಸಿದ್ದುವು. ಸಾಧಾರಣ ಪ್ರತಿಯ ಬಟ್ಟೆಬರೆಗಳುಳ್ಳ ಅವನ ವಯಸ್ಸು ೩೦ ಇರಬಹುದು.

ಇಂದ್ರಭವನದವನು ತಿನ್ನುಣ್ಣುವ ಪದಾರ್ಥಗಳನ್ನವನ ಮುಂದಿರಿಸಿ ಮಾಯವಾದನು.

ವೀರಪ್ಪನು ಅವನನ್ನು ನೋಡಿದ ಮೊದಲ ಕ್ಷಣದಿಂದಲೂ ನಟ್ಟದಿಟ್ಟಿಯಿಂದ ಅವನನ್ನೇ ದೋಡುತ್ತಿದ್ದನು. ಇವನಾರೆಂಬ ಕೌತಕದಿಂದಲ್ಲ; ಆದರೆ ತಾನೊಮ್ಮೆ ನೋಡಿದಂತಿರುವ, ಆದರೂ ಈಗ ತಾನೇ ಸಂಪೂರ್ಣವಾಗಿ ಗುರುತಿಸಿ ತಿಳಿಯಲಾರದ ಭ್ರಂಶಮತಿಯಿಂದ.

ಇಷ್ಟರಲ್ಲಿ ಹೊತ್ತಾದುದನ್ನರಿತು ವೀರಪ್ಪನ ಪರಿಚಿತರಿಬ್ಬರೂ ಎದ್ದುಹೋದರು. ಈಗ ವೀರಪ್ಪನೇ ವೀರಪ್ಪನು; ಈ ಹೊಸ ವ್ಯಕ್ತಿಯೇ ಹೊಸ ವಕ್ತಿಯು.

---

## ಬಾವಿಯನ್ನಗೆದರೆ ಬೇತಾಳ ಹೊರಟಿತು

ಆಪರಿಚಿತ ವ್ಯಕ್ತಿಯು ವೀರಪ್ಪನು ತೀಕ್ಷ್ಣದೃಷ್ಟಿಯಿಂದೀಕ್ಷಿಸುವುದನ್ನು ಲಕ್ಷಿಸಲಿಲ್ಲ. ಅವನಾವುದೋ ಅತಿಗೂಢವಾದ ವಿಚಾರದಲ್ಲಿ ತಲ್ಲೀನನಾಗಿ ಯಾಂತ್ರಿಕ ರೀತಿಯಲ್ಲಿ ಭುಜಿ

ಸುತ್ತಿದ್ದನು. ಮೊದಲು ನುಡಿದ ತನ್ನ ನುಡಿಯನ್ನೀಗ ಮರೆತುಬಿಟ್ಟಿದ್ದನು.

ಇತ್ತ ವೀರಪ್ಪನು ಭ್ರಾಂತಮನಸ್ಕನಾಗಿ ನೋಡಿನೋಡಿ ಮತ್ತೂ ಭ್ರಾಂತನಾದನು. ಅವನೇ ಇವನೆಂಬುದಕ್ಕೆ ೫೦% ಆಧಾರಗಳು ಕಂಡುಬಂದರೂ ಅವನಿಂದಿವನು ಭಿನ್ನ ನೆಂಬುದಕ್ಕೆ ೫೦% ಕಾರಣಗಳು ಕಂಡುಬರದಿರಲಿಲ್ಲ. ಇಷ್ಟೆಲ್ಲಾ ನಡೆದ ಅಲ್ಪಾವಧಿಯಲ್ಲಿಯೇ ಅವನು ಇಷ್ಟು ಧೈರ್ಯವಾಗಿ ಎಷ್ಟೋ ಜನರು ಬಂದುಹೋಗುವ ಈ ಭೋಜ ನಾಲಯಕ್ಕೆ ಬರುವುದು ಅಶಕ್ಯವೆಂದು ಚಿಂತಿಸಿ ಸಮಾಧಾನ ವನ್ನು ತಂದುಕೊಂಡರೂ ಮರುಕ್ಷಣದಲ್ಲಿಯೇ ಅದೇ ಆ ನಿಲುವಂಗಿ, ಅದೇ ಎತ್ತರ, ಅದೇ ಕೂದಲು, ಅದೇ ಉಬ್ಬಿದ ಹಣೆ ಈ ಸಾರೂಪ್ಯವು ಅವನನ್ನು ದಿಗ್ಭ್ರಮೆಗೊಳಿಸಿತು.

ಕೊನೆಗವನು ಮೆಲ್ಲನೆದ್ದುಹೋಗಿ ಅಲ್ಲಿಯವನೊಬ್ಬನ ಕಿವಿಯಲ್ಲಿ ಬಹು ಮೆಲ್ಲನೆ "ಈ ಪುರುಷನಾರು?" ಎಂದು ಕೇಳಿದನು. "ನಿಜವಾಗಿಯೂ ನನಗೆ ಗೊತ್ತಿಲ್ಲ" ಎಂದು ತ್ತರಬರಲು, "ಮಾಲಕನನ್ನು ಕೇಳಿಕೊಂಡುಬಂದು ನನಗೆ ಹಗುರಾಗಿ ಹೇಳು" ಎಂದನು.

ಕ್ಷಣಾರ್ಧದಲ್ಲವನು ಹಿಂದಿರುಗಿಬಂದು "ನಿನಗೆ ಸಂಬಂಧಿ ಸದ ವಿಷಯದಲ್ಲಿ ಕೈಹಾಕಬೇಡವೆ"ಂದು ಯಜಮಾನರು ಗದ್ದರಿಸಿದರೆನ್ನಲು, ವೀರಪ್ಪನ ಸಂಶಯಗಳು ವೃದ್ಧಿಂಗತ ವಾದುವು. ಆದರೂ ಮುಖಚರ್ಯೆಯ ಮೇಲಿಂದ ಅಪ ರಾಧಿಯಲ್ಲವೆಂಬ ಭಾವನೆಯಾಗಲೊಮ್ಮೆ ತಲ್ಲಣಿಸಿದನು. ಆದರೂ ಕೊನೆಗೆ ನಿಜವನ್ನು ಕಾಣಲು ಯತ್ನಿಸಿ ಸಂಭಾಷಣೆ ಗಾರಂಭಿಸಿದನು.

"ಈದಿನ ಬಹು ಚಳಿಯಲ್ಲವೇ" ಎಂಬ ಪ್ರಶ್ನೆಗೆ "ಅತಿಚಳಿ" ಎಂಬ ಮಾತನ್ನು ಮುಗಿಸಿಬಿಡುವ ಉತ್ತರವು ಬರಲು, ವೀರಪ್ಪನು ಖತಿಗೊಂಡು, ಧೈರ್ಯವನ್ನು ತಂದು ಕೊಂಡು, "ಸ್ವಾಮಿಾ ಕ್ಷಮಿಸಿ, ನಾನು ತಮ್ಮನ್ನು ಈ ಮೊದಲು ಕಂಡಿರಲಿಲ್ಲವೆ" ಎಂದು ಪ್ರಶ್ನಿಸಿದನು.

"ನೋಡಿರುವ ಸಂಭವವಿದೆ. ಇಷ್ಟು ಮಾತ್ರ ನಿಜ. ಯಾರ ಲಕ್ಷ್ಯಕ್ಕೂ ಬೀಳಬಾರದೆಂದೂ ಗುಪ್ತವಾಗಿರ ಬೇಕೆಂದೂ ನನ್ನ ಇಷ್ಟವಿದೆಯೆಂಬುದು ನನ್ನ ಬರುವಿಕೆ ಯಿಂದಲೇ ಸ್ಪಷ್ಟವಾಗಿ ತಿಳಿಯಬರುವುದಿಲ್ಲವೇ?" ಎಂದು ಹುಬ್ಬುಗಂಟುಹಾಕಿಕೊಂಡು ಅವನು ಹೇಳಲು, ವೀರಪ್ಪನು ಅಪರಿಚಿತನಿಗೆ ಅತ್ಯಾಶ್ಚರ್ಯವಾಗುವಂತೆ ಚಪ್ಪಾಳೆಯ ನ್ನಿಕ್ಕಿ "ನೀವು ಇಲ್ಲಿಗೆ ಬಂದ ಕ್ಷಣದಲ್ಲಿಯೇ ನನಗದು ತಿಳಿ ಯಿತು. ನೀವಾರೆನ್ನುವ ಸಂಶಯವು ಆಗಲೇ ಚಕ್ಕನೆ ಹೊಳೆ ಯಿತು; ನಿಮ್ಮ ಮಾತಿನಿಂದ ನಿಜಸ್ಥಿತಿಯು ಸ್ಪಷ್ಟವಾಯಿತು" ಎಂದು ನುಡಿದು, ಅಪರಿಚಿತನು "ಹುಚ್ಚುನಾಯಿಯೇ, ಹೊಲಸುಹಂದಿಯೇ" ಎಂದು ಗರ್ಜಿಸುವುದರೊಳಗಾಗಿ ಅಪರಿಚಿತನಿಗೆ ಸಹಾಯಕನಾದ ಇಂದ್ರಭವನದ ಯಜ ಮಾನನನ್ನು ಎಚ್ಚರಿಸಲು ವೀರಪ್ಪನು ಹೋಗಿಬಿಟ್ಟನು.

ಇತ್ತ ಆ ವ್ಯಕ್ತಿಯೂ ತಿನ್ನುವುದನ್ನಲ್ಲಿಗೇ ಬಿಟ್ಟು ತ್ವರಿತ ಗತಿಯಿಂದೆದ್ದು ಹೊರಹೊರಟಿತು.

ಭೋಜನಾಲಯದವರೊಡನೆ ಹೋರಾಡುತ್ತಿದ್ದ ವೀರ ಪ್ಪನು ತನ್ನ ಬೇಟೆಯು ತಪ್ಪಿಸಿಕೊಂಡು ಹೋಗುವುದನ್ನು ನೋಡಿ ಅತ್ತಕಡೆಗೆ ನಾಗಾಲೋಟದಿಂದ ಓಡಿದನು. ದುರ್ದೈ ವದಿಂದ ಹೊಸ್ತಿಲವನ್ನೆಡವಿ ಬೀಳಲು ಅಪರಿಚಿತನಪ್ಪರ

ಲ್ಲೆಲ್ಲಿಯೋ ಮಾಯವಾದನು.

ವೀರಪ್ಪನು ದಿಙ್ಮೂಢನಾಗಿ ನಿಂತಿರಲು " ಉಸ್ಮಾನ್, ನಾವು ಪೋಲೀಸರೆಂದು ಹೇಳದಿರುವುದೊಳ್ಳೆಯದು" ಎಂದಾರೋ ನುಡಿಯಲು ವೀರಪ್ಪನಲ್ಲಿ ನವಚೈತನ್ಯೋದಯ ವಾಯಿತು. ಕೂಡಲೇ ಅತ್ತ ತಿರುಗಿ " ಪೋಲೀಸ್! ನೀವು ಪೋಲೀಸರೇ? ಹಾಗಾದರೆ ನಿಮಗೆ ನಾನು ಸಹಾಯ ಮಾಡುವೆನು. ನೀವೇಕೆ ಬಂದಿರುವಿರೆಂಬುದು ನನಗೆ ಗೊತ್ತಿದೆ " ಎಂದು ಸಾರಲು, ಅವರಲ್ಲೊಬ್ಬನು " ಹುಶ್ ಬಹುಮೆಲ್ಲಗೆ. ನಾವು ಹೀಗೆ ತಿರುಗುವೆವೆಂದು ತಿಳಿದರೆ, ಅವನು ಪಲಾಯನ ಸೂಕ್ತ್ರವನ್ನು ಪಠಿಸುವನು " ಎಂದನು. ವೀರಪ್ಪನು " ಹಾಗಾದರೆ ನನ್ನನ್ನೇ ಹಿಂಬಾಲಿಸಿರಿ. ವಿಜಯ ಪುರದ ಕೆಲಸಕ್ಕಾಗಿ ನೀವು...." ಎನ್ನುವುದರಲ್ಲಿ, "ಅಹುದು. ಅದಕ್ಕೇ. ಮೃತ್ಯುಂಜಯನನ್ನು ಹಿಡಿದುಕೊಟ್ಟವರಿಗೆ ೫೦೦೦ ರೂ. ಗಳ ಬಹುಮಾನ" ಎಂದಿಬ್ಬರೂ ಹೇಳಿ ವೀರಪ್ಪನ ಕೈಯಲ್ಲೊಂದು ಕಾಗದವನ್ನಿತ್ತರು. ಅವನು ಅದನ್ನೋದಿ ಆ ವ್ಯಕ್ತಿಯ ವರ್ಣನೆಯು ಆ ಕಾಗದದಲ್ಲಿರು ವುದನ್ನು ನೋಡಿ ಆನಂದಪಟ್ಟನು. ವೀರಪ್ಪನ ಸಮಾಜಕ್ಕೆ ಸಂಬಂಧಿಸಿದ ತನ್ನ ಕರ್ತವ್ಯದ ಅರಿವು ಬಹುಮಾನವೆಂಬ ಪ್ರೋತ್ಸಾಹದಿಂದ ತೀಕ್ಷ್ಣವಾಯಿತು.

ದಾರಿಯಲ್ಲೊಂದು ಕುದುರೆಯ ಗಾಡಿಗಳ ನಿಲ್ದಾಣವಿತ್ತು, ಅಲ್ಲೊಬ್ಬನನ್ನು ವೀರಪ್ಪನು ಕರೆದು " ಏನಯ್ಯಾ, ಉದ್ದ ನಿಲುವಂಗಿಯವನೊಬ್ಬನು ಒಂದು ಗಾಡಿಯಲ್ಲಿ ಕುಳಿತು ಹೋಗಲಿಲ್ಲವೇ? ಅವನು ಅದನ್ನು ಎಲ್ಲಿಗೆ ತೆಗೆದುಕೊಂಡು ಹೋಗಬೇಕೆಂದಾಜ್ಞಾಪಿಸಿದನು?" ಎನ್ನಲು, " ಅಹುದು

ಸ್ವಾಮಿ, ಅವರು ದುರ್ಗದ ಮಾರ್ಗದಲ್ಲಿ ಆ ಹಳದಿಯ ಗಾಡಿಯನ್ನು ಹೊಡೆಯೆಂದರು ” ಎಂದುತ್ತರ ಬಂದಿತು.

ಕೂಡಲೇ ಮೂವರೂ ಹಾರಿ ಗಾಡಿಯಲ್ಲಿ ಕುಳಿತು ದುರ್ಗದ ಮಾರ್ಗಕ್ಕೆ ನಡೆಯೆಂದಾಜ್ಞಾಪಿಸಿದರು. ಮೊದಲಿನ ಗಾಡಿಯನ್ನು ಸಂಧಿಸಿದರೆ ಐದು ರೂಪಾಯಿಗಳ ಬಹುಮಾನವು ದೊರೆಯುವುದೆಂದು ವೀರಪ್ಪನು ಹೇಳಲು ಗಾಡಿಯು ವಾಯುಗತಿಯನ್ನು ಮೀರಿತು.

ದಾರಿಯಲ್ಲಿ ಪೋಲೀಸರು ಬಂದೂಕಿನ ಗಂಡಸುತನದ ಮುಂದೆ ಲೆಕ್ಕಣಿಕೆಯ ಹೇಗಸುತನವು ನಡೆಯಲಾರದೆಂದೂ, ಇಂಪ್ರಭವನದಲ್ಲಿ ಸಂಶಯಬಂದ ಕ್ಷಣದಲ್ಲಿಯೇ ಅವನನ್ನು ನೆಲಕ್ಕೆ ಕೆಡವಿ ಕೈಕಾಲು ಕಟ್ಟಿ ಮುಂದೆ ಬಂದುದನ್ನು ನೋಡಿಕೊಂಡಿದ್ದರೆ ಸರಿಯಾಗುತ್ತಿತ್ತೆಂದೂ ನೂರು ಧರ್ಮಾರ್ಥ ಶಾಲೆಗಳನ್ನು ಸ್ಥಾಪಿಸುವುದರ ಬದಲು ಒಂದು ಧರ್ಮಾರ್ಥ ಫಲಾಹಾರದ ಅಂಗಡಿಯನ್ನು ತೆರೆಯುವುದು ಹಿತಾವಹವೆಂದೂ ವೀರಪ್ಪನಿಗೆ ವಿವರಿಸುತ್ತಿದ್ದರು.

ಗಾಡಿಯವನು ತಮ್ಮ ಗುರಿಯ ಗಾಡಿಯು ದೂರದಲ್ಲಿರುವುದನ್ನು ತೋರಲು ಮರುಭೂಮಿಯ ಪ್ರವಾಸಕರಿಗೆ ಮರುವನವು ತೋರಿದಂತಾಯಿತು. ಅಷ್ಟರಲ್ಲಿ ಆ ಗಾಡಿಯು ನಿಲ್ಲಲು ಎಲ್ಲರೂ ಉತ್ಸುಕರಾಗಿ ನೋಡಲಾರಂಭಿಸಿದರು. ಗಾಡಿಯವನು ಉದ್ದನಿಲುವಂಗಿಯವನೊಬ್ಬನು ಕೆಳಗಿಳಿದು, ಅಡ್ಡದಾರಿಯನ್ನು ಸೇರಿ ಎಡಭಾಗದ ಕೇರಿಯನ್ನು ಸೇರಿದನೆಂದು ಹೇಳಿದನು.

ಮುಂದೆ ಆ ಹಳದಿಯ ಗಾಡಿಯು ಹಿಂದಿರುಗಿ ಬರಲು ಆ ವ್ಯಕ್ತಿಯು ಎಲ್ಲಿಗೆ ಹೋಯಿತೆಂದೂ ಏನು ಹೇಳಿ

ತೆಂದೂ ವೀರಪ್ಪನು ಕೇಳಿದ ಪ್ರಶ್ನೆಗಳಿಗೆ ಆ ಗಾಡಿಯವನು "ನೀವು ಮುಂದೆ ಜೋಲುಬಿದ್ದು ನೋಡುವುದನ್ನವನು ನೋಡಿ ನನಗೊಂದು ರೂಪಾಯಿಯನ್ನು ಕೊಟ್ಟು ಕೂಡಲೇ ಕಣ್ಣಿಗೆ ಕಾಣದಂತೆ ಹೊರಟುಹೋದನು" ಎಂದು ಹೇಳಿದನು.

ಆ ವ್ಯಕ್ತಿಯಿಳಿದ ಸ್ಥಳವನ್ನು ಸೇರಿದ ಕೂಡಲೇ ವೀರಪ್ಪನು ಅತ್ಯವಸರದಿಂದ ಕೆಳಕ್ಕೆ ಹಾರಿ ಹುಚ್ಚನಂತೆ ಓಡಿಹೋದನು. ಉಸ್ಮಾನಮಹಮ್ಮದರೂ ಸಹ ತಾವೂ ಹೋಗುವುದು ವಿಹಿತವೆಂದು ಭಾವಿಸಿ ಓಡಲು ಯತ್ನಿಸಿದರು. ಆದರೆ ಗಾಡಿಯವನು ಕೂಲಿಯನ್ನು ಕೊಟ್ಟಲ್ಲದೆ ಬಿಡುವುದಿಲ್ಲವೆನ್ನಲು ಗೊಂದಲವೆದ್ದಿತು. ಪೋಲೀಸರು ವೀರಪ್ಪನಿಂದಲೇ ಬಾಡಿಗೆಯನ್ನು ಕೊಡಿಸಬೇಕೆಂದೂ ತಾವು ಕಾಸನ್ನೂ ಕಳಕೊಳ್ಳಬಾರದೆಂದೂ ನಿಶ್ಚಯಿಸಿದ್ದರು. ಕೊನೆಗೆ ಇಬ್ಬರೂ ಗಾಡಿಯಲ್ಲಿಯೇ ಕುಳಿತು ವೀರಪ್ಪನನ್ನನುಸರಿಸತಕ್ಕುದೆಂದು ಗೊತ್ತಾಯಿತು.

ಇತ್ತ ವೀರಪ್ಪನು ಆ ಕೇರಿಯಲ್ಲೆಲ್ಲಿ ಕೇಳಿದರೂ ಆ ವ್ಯಕ್ತಿಯ ಸುಳಿವೇ ಗೊತ್ತಾಗಲಿಲ್ಲ. ಆಗ ಮಧ್ಯರಾತ್ರಿಯು ಸಮೀಪಿಸುತ್ತಿತ್ತು. ಒಂದು ವೇಳೆ ಅವನು ಸಿಕ್ಕರೂ ತಾನೊಬ್ಬನೇ ಅವನನ್ನು ಹಿಡಿದುಕೊಂಡು ಹೋಗಲಾಗುವುದೋ ಇಲ್ಲವೋ ಎಂಬುದನ್ನು ವಿಚಾರಿಸಲಾಗದಷ್ಟು ಅವನು ಗಡಿಬಿಡಿಯಲ್ಲಿದ್ದನು. ಪೋಲೀಸರು ಹಿಂದುಳಿದರೆಂಬುದು ಅವನ ಲಕ್ಷ್ಯದಲ್ಲಿರಲಿಲ್ಲ.

ವೀರಪ್ಪನೊಂದು ಸಂದಿಯನ್ನು ಸೇರಿದಾಗ ದೊಡ್ಡ ಶರೀರವೊಂದು ದೊಡ್ಡ ಬಡಿಗೆಯನ್ನು ಹಿಡಿದುಕೊಂಡು

ಬರುತ್ತಿತ್ತು. ಆವನಿಗೆ ಭಯವಾಯಿತು; ಸಹಾಯಕರಿರ ಲಿಲ್ಲ. ನಿರ್ವಾಹವಿಲ್ಲದೆ ಹಣದ ಚೀಲ, ಚಿನ್ನದ ಗಡಿ ಯಾರ, ವಜ್ರಮುಂಗುರ ಮೊದಲಾದುವುಗಳು ಒಂದೊಂದಾಗಿ ಕೈಬಿಟ್ಟುವು. ಸುಲಿಗೆಯವನು ಕೊಟ್ಟಕೊನೆಗೆ ಶೇಷಯ್ಯ ಶೆಟ್ಟಿ ಸುಬ್ರಾಯಶೆಟ್ಟಿಯವರ ವ್ಯವಹಾರಕ್ಕೆ ಸಂಬಂಧಿಸಿದ ಹುಂಡಿಗಳನ್ನೂ ಕಾಗದಪತ್ರಗಳನ್ನೂ ಕಿತ್ತುಕೊಂಡು ೫೦೦ ರೂ. ಗಳನ್ನು ಕೊಟ್ಟರೆ ಇದ್ದಕ್ಕಿದ್ದ ಹಾಗೆ ಎಲ್ಲ ಕಾಗದಗಳೂ ನಿನ್ನ ಕೈಸೇರುವವೆಂದು ಹೇಳಿದನು. ಅವುಗಳ ನ್ನೊಯ್ಯದಿದ್ದರೆ ವೀರಪ್ಪನ ಅವತಾರವು ಮುಗಿಯುತ್ತಿತ್ತು ೫ ರೂ. ಗಳಿಲ್ಲದಾಗ ೫೦೦ ರೂ. ಗಳನ್ನು ತೆರುವುದೆಂತು? ವೀರಪ್ಪನು ತನಗೆ ಸಾಕ್ಷಾತ್ತಾಗಿ ಸಂಬಂಧಿಸದ ಕಾರ್ಯ ದಲ್ಲಿ ಕೈಹಾಕಿದುದರ ಫಲವಿದೆಂದು ಮನದಲ್ಲಿಯೇ ಹಲುಬಿ ದನು. ಆಗ ಆ ದರೋಡೆಖೋರನು “ನೀನು ನಾಳೆ ರಾತ್ರಿ ೯ ಗಂಟೆಗೆ ಕಾಳೀಘಾಟಿನ ಸೇತುವೆಗೆ ಬಾ. ಅಲ್ಲೊಬ್ಬ ಕರಿಯ ವಸನದ ಸ್ತ್ರೀಯು ಬಂದಿರುವಳು. ಮೊದಲು ಅವಳೇ ನಿನ್ನನ್ನು ಮಾತನಾಡಿಸುವುದಿಲ್ಲ. ನೀನೇ ಅವಳನ್ನು ಜತನ ದಿಂದ ಮಾತನಾಡಿಸಿ, ನಿಜಸ್ಥಿತಿಯನ್ನು ವಿವರಿಸಿ, ೫೦೦ ರೂ. ಕೊಟ್ಟರೆ ಅವಳು ನಿನಗೆ ಎಲ್ಲ ಕಾಗದಗಳನ್ನೂ ಹಿಂದಕ್ಕೆ ಕೊಡುವಳು. ಈ ಕೆಲಸವನ್ನು ನಾಳೆಯ ರಾತ್ರಿಗಿಂತಲೂ ಮೊದಲು ಮಾಡಲಾಗುವುದಿಲ್ಲ. ಇಗೋ ನೋಡು! ಅವಳ ರಕ್ಷಣೆಗಾಗಿ ಕೆಲವರು ಬಂದೂಕನ್ನು ಎತ್ತಿಹಿಡಿದೇ ದೂರ ದಲ್ಲಿ ಸುಳಿದಾಡುತ್ತಿದ್ದಾರೆ. ನೀನೇನಾದರೂ ಪೋಲೀಸರ ಸಹಾಯವನ್ನು ಪಡೆದರೆ ನನ್ನ ಮೇಲೆ ಮಾತಿಲ್ಲ. ನಾನೂ ಒಂದು ವಿಧದಲ್ಲಿ ಒಳ್ಳೆಯವನು. ನಿನಗೇನಾದರೂ

ತೋಂದರೆಯುಂಟಾದರೆ ಪ್ರತಾಪರುದ್ರನಿಗೆ ಎಂದೊಂದು ಪತ್ರವನ್ನು ಬರೆದು ಸ್ಮಶಾನಮಾರ್ಗದಲ್ಲಿರುವ ದೇವಾಲಯ ದಲ್ಲಿಡು. ಅದು ನನಗೆ ತಲಪುವುದು. ನಮ್ಮ ಗುಪ್ತಸಂಘದ ಹೆಸರು ಭಿಕ್ಷುಕ ಸಂಘವೆಂದು; ಅದು ಮೇಲೆ ಹೇಳಿದ ಮಾರ್ಗ ದಲ್ಲಿದೆ ” ಎಂದು ಹೇಳಿ ಸಂದಿಯನ್ನು ಸೇರಿ ಅಡಗಿದನು.

ನಂತರ ವೀರಪ್ಪನು ಪೋಲೀಸರು ಬಾರದಿದ್ದುದರಿಂದಲೇ ಇಷ್ಟೆಲ್ಲಾ ಅನಾಹುತವಾಯಿತೆಂದು ಅವರನ್ನು ಶಪಿಸುತ್ತ, ಬಂದ ದಾರಿಗೆ ಸುಂಕವಿಲ್ಲವೆಂದು ಹಿಂತಿರುಗಿದನು.

ಇತ್ತ ವೀರಪ್ಪನನ್ನು ಕಾಣದೆ ಪೋಲೀಸರು ಕುದುರೆಯ ಗಾಡಿಯಲ್ಲಿ ಕುಳಿತು ವೀರಪುರವನ್ನು ಸೇರಿದರು.

ಅರ್ಧ ರಾತ್ರಿಯು ಕಳೆದು ಒಂದು ಬಾರಿಸಿದಾಗ ವೀರ ಪ್ಪನು ನಿತ್ರಾಣನಾಗಿ ಇಂದ್ರಭವನಕ್ಕೆ ಬಂದು ಒಂದು ಕೋಣೆಯಲ್ಲಿ ಬಿದ್ದುಕೊಂಡನು.

ಮರುದಿನ ಮುಂಜಾವಿನಲ್ಲಿಯೇ ಉಸ್ಮಾನಮಹಮ್ಮದರ ಬಾಡಿಗೆಯನ್ನು ಬೇಡುವುದಕ್ಕಾಗಿ ಬಂದು ಇವನ ನಿದ್ರೆಯ ನ್ನೋಡಿಸಲು ವೀರಪ್ಪನು ಸಾಲಮಾಡಿ ಋಣಮುಕ್ತನಾಗ ಬೇಕಾಯಿತು.

---

## ರಮಣೀ ರತ್ನಗಳು

ಯಾವ ಮಹನೀಯನ ದರ್ಶನಲಾಭದಿಂದ ವೀರಪ್ಪನು ಗಂಡಾಂತರಕ್ಕೀಡಾದನೋ ಅಂಥವನ ಕಡೆಗಿಷ್ಟು ತಿರುಗಿ ನೋಡೋಣ.

ವೀರಪ್ಪನು ಕಳ್ಳನನ್ನು ಸಂದರ್ಶಿಸಿದ ಶುಭಕರ ಮೂಳೆಗೆ

ಅನತಿದೂರದಲ್ಲೊಂದು ಮಹಲಿತ್ತು. ಅಲ್ಲೊಬ್ಬ ವಿಧುರನು ತನ್ನೆರಡು ಕನ್ಯಾರತ್ನಗಳೊಡನಿದ್ದನು. ೩೫ ನೆಯ ವಯಸ್ಸಿನವನಿರುವಾಗಲೇ ಹೀನಸ್ಥಿತಿಯಲ್ಲಿದ್ದಾ ವೆಂಕಟರಾಯನ ಪತ್ನಿಯು ಪರಲೋಕವನ್ನೈದಲು ತನ್ನ ಪುತ್ರಿಯರಿಗೆ ತಾನೇ ಆಧಾರಸ್ತಂಭನಾದನು. ಶುಕ್ಲಪಕ್ಷದ ಚಂದ್ರನಂತೆ ಪ್ರವರ್ಧಮಾನರಾಗುತ್ತಿದ್ದ ಪುತ್ರಿಯರು ವಿದ್ಯಾವತಿಯರಾಗಿದ್ದರಲ್ಲದೆ ಈ ಲೋಕದ ಮೋಹ, ದ್ವೇಷ, ಗರ್ವ ಮೊದಲಾದ ಪಾಶಗಳ ಅರಿವಿಲ್ಲದವರಾಗಿದ್ದರು.

ದಾರಿದ್ರ್ಯವಿನ್ನೂ ಇವನನ್ನು ತೊರೆದಿರಲಿಲ್ಲವಾದುದರಿಂದ ತನ್ನ ದೂರದಾಪ್ತರೊಂದವನನ್ನು ಪರಿಹರಿಸಿಕೊಳ್ಳಬೇಕೆಂದು ವೆಂಕಟರಾಯನು ನಿಶ್ಚಯಿಸಿದನು. ಅವರನ್ನು ನೋಡದೆ ಬಹುದಿನಗಳಾದುದರಿಂದಲೂ ತನ್ನ ಪುತ್ರಿಯರು ಕೆಲದಿನಗಳ ಮಟ್ಟಿಗೆ ತನ್ನನ್ನು ಬಿಟ್ಟಿರುವಷ್ಟು ದೊಡ್ಡವರಾಗಿದ್ದುದರಿಂದಲೂ ವೆಂಕಟರಾಯನು ಊರಿಗೆ ಹೋದೆರಡು ದಿನಗಳು ಕಳೆಯುವುದರಲ್ಲಿ ವೀರಪ್ಪ ಮೃತ್ಯುಂಜಯರ ಕಥಾನಕಗಳು ನಡೆದುಬಿಟ್ಟುವು.

ಅಕ್ಕತಂಗಿಯರಿಬ್ಬರೂ ಅತ್ಯಂತ ಚಲುವೆಯರೆಂದೂ, ಅವರು ತಂದೆಯು ತಪಾಂಗಾಗಿ ಅನುಭವಿಸಿದುದೆಲ್ಲವನ್ನೂ ಅರಿತಿದ್ದರೆಂದೂ, ಮನೆಗೆಲಸ ನಡಾವಳಿಗಳೇ ಮೊದಲಾದುವುಗಳಲ್ಲ ಆದರ್ಶಪ್ರಾಯರಾಗಿದ್ದರೆಂದೂ ಸ್ವಲ್ಪದರಲ್ಲಿ ವಿವರಿಸಿ ಮುಖ್ಯ ವಿಷಯದ ಕಡೆಗೆ ಹೊರಳಿದರೆ ವಾಚಕರಿಗೆ ಇವರ ವಿಷಯವು ಕೆಲಮಟ್ಟಿಗೆ ತಿಳಿದುಬರುವುದರಿಂದ ಮುಂದಿನ ಭಾಗದ ಮಹತ್ವವು ಅವರನ್ನಾಕರ್ಷಿಸುವುದು.

ವೀರಪ್ಪನ ಸಾಹಸ ಪ್ರದರ್ಶನವಾದ ರಾತ್ರಿ ಸುಮಾರು

ಹನ್ನೆರಡು ಗಂಟೆಯಾಗಿತ್ತು. ಊರಿಗೆ ಹೋಗುವ ಅವಸರ ದಲ್ಲಿದ್ದ ಅಗಸನೊಬ್ಬನು ಅಲ್ಲಿಗೆ ಬಂದು ಬಾಗಿಲನ್ನು ಬಡಿದನು. ತಾರೆಯು ಬಾಗಿಲನ್ನು ತೆರೆಯಲು, ಅಪರಾತ್ರಿಯಲ್ಲಿ ಬಂದುದಕ್ಕೆ ಕ್ಷಮೆಯನ್ನು ಬೇಡಿ, ಬಟ್ಟೆಯನ್ನವರಿಗೆ ಕೊಟ್ಟು, ಅಗಸನು ಹೊರಟುಹೋದನು. ಸುಂದರವಾದ ಚಂದ್ರಿಕೆಯಲ್ಲಿ ಇಂದ್ರಜಾಲವಂದು ತೋರಿಬರಲು ಚಂದ್ರ ವದನೆಯು ಅಂಗಳದಲ್ಲೊಂದು ಕ್ಷಣ ನಿಂತಳು. ದೂರ ದಿಂದೊಂದು ಕುದುರೆಯ ಗಾಡಿಯಿಂದಿಳಿದ ನಿಲುವಂಗಿಯ ವನೊಬ್ಬನಿಗೆ ಆ ಮನೆಯ ದೀಪವು ಗೋಚರಿಸಲು, ತೇಗುತ್ತ ತೇಗುತ್ತ ಓಡಿಬಂದು "ಕರುಣಾಮೂರ್ತಿಗಳೇ, ಕೆಲವು ನಿಮಿಷಗಳ ಪಟ್ಟಿಗೆ ವಿಶ್ರಮಿಸಿಕೊಳ್ಳಲು ನನಗವ ಕಾಶಕೊಡುವಿರಾ?" ಎಂದು ದೀನಸ್ವರದಿಂದ ಕೇಳಿ ಕೊಂಡನು. ಅವಳು ಕ್ಷಣಕಾಲ ಚಿಂತಿಸಿದ್ದರೆ ಅಪರಾತ್ರಿ ಯಲ್ಲಿ ಅಪರಿಚಿತನಲ್ಲಿ ಬರುವುದು ವಿಪರೀತ ಲಕ್ಷಣವೆಂದು ಭಾವಿಸಿ ಅವನನ್ನೆಂದೂ ಬರಮಾಡಿಕೊಳ್ಳುತ್ತಿರಲಿಲ್ಲ. ಆದರೆ ಅವನ ಆಕಸ್ಮಿಕ ಆಗಮನದಿಂದಲೂ ಅವನ ರಾಜ ಶೀವಿಯಿಂದಲೂ, ಸೌಜನ್ಯ ಸ್ವರೂಪದರ್ಶನದಿಂದಲೂ, ಭ್ರಾಂತಳಾದ ಆ ಭೀರುವು ಅವನಿಗೆ ಅಸಮ್ಮತಿಯನ್ನು ವ್ಯಕ್ತಪಡಿಸಲಿಲ್ಲ. ಕೂಡಲೇ ಅವನು ಅವಸರವಸರದಿಂದ ಒಳಹೊಕ್ಕನು.

ಇತಿಕರ್ತವ್ಯತಾ ವಮೌಢ್ಯವನ್ನು ಹೊಂದಿದ್ದ ತಾರೆಗೆ ಮಿಂಚಿನಂತೆ ಅವನು ಸರಿದ ಕೂಡಲೇ ತನ್ನ ಅಕಾರ್ಯದ ಅರಿವುಂಟಾಗಿ ಮೈಜುಮ್ಮೆಂದಿತು. ಆದರೂ ಆಗ ಹೊರಗಿ ರಲು ಬೆದರಿ, ಧೈರ್ಯದಿಂದೊಳಹೊಕ್ಕು ಬಾಗಿಲನ್ನಿಕ್ಕಿದಳು.

ಇವೆಲ್ಲವೂ ನಿಮಿಷಾರ್ಧದಲ್ಲಿ ನಡೆದುದರಿಂದ ಹಳದಿಯು ಗಾಡಿಯವನಿಗಿವನ ಸುಳಿವು ಎಳ್ಳಷ್ಟೂ ಹತ್ತಲಿಲ್ಲ.

ನಡುಮನೆಯಲ್ಲೋದುವುವರಲ್ಲಾ ಸಕ್ತಳಾದ ಲೀಲೆಗೆ ಪುರುಷನ ಪದಾಘಾತವನ್ನು ಕೇಳಿ ಆಶ್ಚರ್ಯವೂ ಭಯವೂ ಏಕ ಕಾಲದಲ್ಲುಂಟಾಗಲು, ಅದನ್ನರಿತಾ ವ್ಯಕ್ತಿಯು ತನ್ನೊರಟುತನವನ್ನು ಕ್ಷಮಿಸಬೇಕೆನ್ನುವುದರೊಳಗಾಗಿ ತಾರೆಯೂ ಬಂದಲ್ಲಿ ನಿಂತಳು. ಈ ಸದ್ಗೃಹಸ್ಥನು ಮನದಲ್ಲಿಯೇ ಅವಳ ಸೌಂದರ್ಯಾತಿಶಯವನ್ನು ಬಹು ಮೆಚ್ಚಿದನು. ಇಷ್ಟರಲ್ಲಿ ತಾರೆಯ ಮೋರೆಯು ಸ್ಪಷ್ಟವಾಗೀಗ ಕಂಡು ಬರಲು ಅವಳನ್ನೂ ಎವೆಯಿಕ್ಕದೆ ನೋಡಿ ಇನ್ನೂ ಹೆಚ್ಚು ವಿಸ್ಮಯಕೊಂಡನು. ಆದರೂ ತನ್ನಾ ಪರಿಸ್ಥಿತಿಯಲ್ಲಿ ಇಂತಿರುವುದು ಲೇಸಲ್ಲವೆಂದೂ ಬಾಲೆಯರಿಗಭಯವನ್ನೀಯುವುದು ಉಚಿತವೆಂದೂ ಭಾವಿಸಿ ಇಂತು ನುಡಿದನು—

"ಸುಂದರಿಯರೇ, ನಿಮ್ಮನ್ನು ಬಹು ಮೆಚ್ಚಿದೆನು. ನನ್ನೀ ವಿಚಿತ್ರತಮ ಬರುವಿಕೆಯೇ ಮೊದಲಾದ ವರ್ತನಗಳು ನಿಮ್ಮ ದೃಷ್ಟಿಯಿಂದ ಅನ್ಯಾಯದ್ದೂ, ಒರಟುತನದ್ದೂ, ಆಗಿರಬಹುದು. ನಾನು ನಿರ್ವಾಹವಿಲ್ಲದೆ ನಿಮಗೆ ತೊಂದರೆಯನ್ನು ಏಕೆ ಕೊಟ್ಟೆನೆಂಬುದನ್ನು ಸ್ವಲ್ಪ ಮಿಶ್ರಮಿಸಿಕೊಳ್ಳುತ್ತಾ ವಿವರಿಸುವೆನು."

ಹೀಗೆಂದ ಕೂಡಲೇ ಅಕ್ಕತಂಗಿಯರಿಬ್ಬರೂ ಒಬ್ಬರ ಮೋರೆಯನ್ನೊಬ್ಬರು ನೋಡಿದರು. ಇನ್ನವನಿಗೆ ಎಡೆಗೊಟ್ಟುದನುಚಿತವಲ್ಲವೆಂದವರ ಭಾವನೆಯಾಯಿತು.

ಅವರ ಮುಖವು ಕಾಂತಿಯುಕ್ತವಾದುದನ್ನು ನೋಡಿ ಇದವರ ಮೌನಸಂಭಾಷಣೆಯ ಪರಿಣಾಮವೆಂದಾ ಅಪರಿಚಿತನು

ಅರಿಯದಿರಲಿಲ್ಲ. ಅವನು ತನ್ನ ನಿಲುವಂಗಿಯನ್ನು ತೆಗೆದಿಟ್ಟು ಅಲ್ಲಿದ್ದೊಂದು ಕುರ್ಚಿಯನ್ನಲಂಕರಿಸಿದನು. ಇತ್ತ ಆ ನವತರುಣಿಯರು ಅವನ ರೂಪರೇಖಾ ಲಾವಣ್ಯಕ್ಕೂ ವಾಗ್ವೈಖರಿಗೂ ಕ್ರಮೇಣ ತಲೆದೂಗಿ ಅವನ ಸಂಪೂರ್ಣ ಪರಿಚಯಾಭಿಲಾಷೆಯುಳ್ಳವರಾದರು.

ಅಪರಿಚಿತನು ತನ್ನ ನಿಜವಾದ ಹೆಸರನ್ನು ಹೇಳದೆ, ತಾನು ಭೀಮರಾಯನೆಂಬ ಸಾಧಾರಣ ಪ್ರತಿಯ ಶ್ರೀಮಂತನೆಂದೂ ತಾನು ಅತಿ ಸಾಧುಗುಣನಾದುದರ ದುರುಪಯೋಗವನ್ನು ಅನೇಕರು ಮಾಡಿಕೊಂಡರೆಂದೂ, ಅವರಲ್ಲೊಬ್ಬನು ತನ್ನ ಜಾಮೀನಿನ ಮೇಲೆ ಬಹು ದ್ರವ್ಯವನ್ನು ಸಾಲವಾಗಿ ತೆಗೆದುಕೊಂಡು ತಲೆತಪ್ಪಿಸಿಕೊಂಡನೆಂದೂ, ಅದರ ಫಲವಾಗಿ ಕಾಯಿದೆಯೆಂಬ ಪಿಡುಗಿಗೀಡಾದೆನೆಂದೂ, ಅವರಂಥ ಕೋಮಲೆಯರಿಗೆ ನ್ಯಾಯಾಸ್ಥಾನದ ಬೇಲೀಫನಂಥ ಘಟಸರ್ಪದ ವಿಷಯವು ತಿಳಿಯದೆಂದೂ, ತಾನೀಗ ಬೇಲೀಫನ ಕೈಯಿಂದ ಪಾರಾಗಿಬಂದಿರುವೆನೆಂದೂ, ಕೌತುಕಮಯವಾಗಿರುವಂತೆ ಸಂಭಾಷಣೆಯ ಮಾಲಿಕೆಯಲ್ಲಿ ಅವನರುಹಲು ಬಾಲಿಕೆಯರಿಗೆ ಅವನಲ್ಲಿ ಹೆಚ್ಚು ಸಲುಗೆಯುಂಟಾಯಿತು.

ಅವರಿಬ್ಬರೂ ಅವನ ಆಗಮನದಿಂದ ತಮಗಾದ ಆನಂದವನ್ನರುಹಿ, ಅತಿಥಿಗೆ ಅನ್ನೋದಕಗಳನ್ನರ್ಪಿಸಿದರು.

ಅವರಿಗೀ ರೀತಿಯಲ್ಲಿ ತೊಂದರೆಕೊಟ್ಟುದಕ್ಕಾಗಿ ಅನುತಾಪವನ್ನವನು ಸೂಚಿಸಲು ತಮಗೀ ಕೆಲಸವು ಚಿರಪರಿತವಾದುದರಿಂದ ಇದು ತೊಂದರೆಯಲ್ಲವೆಂದೂ ದಾಸಿಯನ್ನಿಟ್ಟುಕೊಳ್ಳಲು ಸಾಧ್ಯವಿಲ್ಲದುದರಿಂದ ತಾವೇ ಕೆಲಸಮಾಡಬೇಕಾಗಿದೆಯೆಂದೂ ನಿಧಾನವಾಗಿ ತಾರೆಯರುಹಲು, ಅವರ

ಸೌಜನ್ಯವನ್ನು ಸ್ವಲ್ಪ ಶ್ಲಾಘಿಸಿ ತಾನಿನ್ನೂ ಅವಿವಾಹಿತನಾದುದರಿಂದ ಇಂತಹ ಗೃಹಸೌಖ್ಯವು ತನಗಪೂರ್ವವೆಂದು ಸೂಚಿಸಿದನು.

ಮಾತಿನ ಮಾಲಿಕೆಯಲ್ಲಿ ಈ ತರುಣಿಯರ ತಂದೆಯು ಊರಿನಲ್ಲಿಲ್ಲವೆಂದೂ ಇವರೀರ್ವರೇ ಇರುವರೆಂದೂ ಘೀಮರಾಯನು ತಿಳಿದನು. ಸರಲಸ್ವಭಾವದ ಸುಂದರಿಯರು ತಮ್ಮ ತಂದೆಯ ದುಡ್ಡಿನ ಪ್ರಯತ್ನಗಳನ್ನು ವಿವರಿಸಲು ಅವನಿಗೆಲ್ಲಾ ಕಾರ್ಯಗಳೂ ಕೈಗೂಡಲೆಂದವನು ನುಡಿದು ಅವರೊಡನೆ ಎಲ್ಲ ವಿಷಯದಲ್ಲಿಯೂ ಸಹಾನುಭೂತಿಯನ್ನು ವ್ಯಕ್ತಪಡಿಸಿದನು.

ಆಗ ಮಧ್ಯರಾತ್ರಿಯು ಕಳೆದು ಗಡಿಯಾರದಲ್ಲೊಂದು ಬಾರಿಸಿತು. ಮುಂದೆ ಇಂದುಮತಿ ಕಮಲೆಯರ ಗಾಡಿಯು ಮುರಿದು ಗಂಡಾಂತರಕ್ಕವರು ಈಡಾದುದೇ ಮೊದಲಾದುದನ್ನು ವಾಚಕರು ವಿವರವಾಗಿ ಈಗಾಗಲೇ ಅರಿತಿರುವರು.

---

# ಶಿಶುಪರಿತ್ಯಾಗ

ಕಮಲಾಬಾಯಿಯು ಕರೆಕಳಿಸಿದ ಕೂಡಲೇ ಘುಂಡೀರಾಜನು ನಾಗಾಲೋಟದಿಂದೋಡಿಹೋದನು. ತಾನುಟ್ಟುದು ಮಗ್ಗಲುಹಾಸಿಕೆಯೆಂದೂ ತಲೆಗೆ ಸುತ್ತಿದುದು ಕೋರಿಯೆಂದೂ ಮರುದಿನ ಬೆಳಗಿನೆಂಟು ಗಂಟೆಗೆ ಅರೆನಿದ್ದೆಯಿಂದೆದ್ದ ವೈದ್ಯನಿಗೆ ಅರಿಯಲಾಗಲಿಲ್ಲ.

"ವೈದ್ಯರೇ, ನಿಮಗತ್ಯಂತ ಮಹತ್ವದ ವಿಷಯವೊಂದ

ನ್ನರುಹಬೇಕಾಗಿದೆ—ಆದರೂ ಅದನ್ನೆಂತು ಪ್ರಾರಂಭಿಸ ಬೇಕೆಂಬುದನ್ನು— ”

“ ಬಾಯಿಯವರೇ, ನಿಮ್ಮುದ್ದೇಶದ ಕಲ್ಪನೆಯು ನನಗೆ ಕೆಲಮಟ್ಟಿಗೆ ಹೊಳೆದಿದೆಯೆಂದು ಹೇಳಿದರೆ ನಿಮ್ಮ ಭಾರವು ಕೆಲಮಟ್ಟಿಗೆ ಕಡಿಮೆಯಾಗಬಹುದಲ್ಲವೇ ?”

“ ವೈದ್ಯರೇ, ಇದು ನಿಜವೇ ” ಎಂದಾಶ್ಚರ್ಯಪಟ್ಟು, “ಹಾಗಾದರೇ ವಿಷಯವು—” ಎಂಬ ಮಾತನ್ನು ಮುಗಿಯುಗೊಡದೆ “—ಮಗುವಿಗೆ ಸಂಬಂಧಿಸಿದುದು. ನಿಮ್ಮ ಭಾವನೆಗಳನ್ನು ನಾನು ಪ್ರಕಟಪಡಿಸಿದೆನೆಂದು ಭಯಪಡಬೇಡಿರಿ. ನಾನು ಸದ್ಗೃಹಸ್ಥ” ಎಂದವನೆನ್ನಲು, ಕಮಲಾಬಾಯಿಯು ಧೈರ್ಯಹೊಂದಿ “ ಎಂದನಂತರ ನಾನಿನ್ನು ಈ ಗುಪ್ತ— ಅತ್ಯಂತ ಗುಪ್ತ—ವಿಷಯವನ್ನು ವಿವರಿಸಲು ಹಿಂದೆಗೆಯುವುದಿಲ್ಲ. ಇಂದುಮತಿಯ ಕಂಠದಲ್ಲಿ ಮಾಂಗಲ್ಯವಿಲ್ಲವೆಂದೂ ಅವಳು ಪತ್ನಿಯಾಗದ ಪೂರ್ವದಲ್ಲಿಯೇ ಮಾತೃವಾದಳೆಂದೂ ಕುಶಾಗ್ರಮತಿಗಳಾದ ನೀವು ಕಂಡುಕೊಂಡಿರುವಿರಿ. ಅಯ್ಯೋ, ಸುಪ್ರಸಿದ್ಧ ಮನೆತನವೊಂದರ ಗೌರವವಿಂದು ಕಳಂಕಿತವಾಯಿತೇ— ವಿನಾಶವಾಯಿತೇ ! ” ಎಂದುಸಿರಿಟ್ಟಳು.

“ ಆದರೂ ಇಂತಹ ಸ್ತ್ರೀಮನೋದೌರ್ಬಲ್ಯವನ್ನು ಸಂಪೂರ್ಣವಾಗಿ ಆಚ್ಛಾದಿಸಬಲ್ಲ ಉಪಾಯಗಳೂ ಮಾರ್ಗಗಳೂ ಇವೆ. ‘ಕೆಟ್ಟ ಅಡಿಗೆಯನ್ನು ಅಟ್ಟವನೇ ಜಾಣ’ ಅಲ್ಲವೇ ? ”

“ ಆಹಾ ! ವಿಷಯವನ್ನು ಮುಂದರಿಸಲು ನನಗೀಗ ಇನ್ನೂ ಧೈರ್ಯಬಂತು. ಧುಂಡೀರಾಜರೇ, ಆ ದುರ್ದೈವಿಯಾದ

ಮಗುವನ್ನು ನಿಮ್ಮ ವಶಪಡಿಸಲಡ್ಡಿಯಿಲ್ಲವಷ್ಟೇ? ಇದಕ್ಕಾಗಿ ನಿಮಗೆ ಸಲ್ಲಿಸತಕ್ಕ ಬಹುಮಾನವು ನಿಮ್ಮ ಮನದಣಿಕೆಯನ್ನು ಮೀರುವುದು."

"ತಾಯಿ, ಹಾಗೆಯೇ ಆಗಲಿ. ಇದನ್ನು ಬರಿಯ ವ್ಯವಹಾರದ ದೃಷ್ಟಿಯಿಂದೀಗ ನೋಡಬೇಕಾಗಿರುವುದರಿಂದ ಎಚ್ಚರವೂ ಮುಂದಾಲೋಚನೆಯೂ ಈ ಸಂಧಿಯಲ್ಲಿ ಅವಶ್ಯವಿರುವುದರಿಂದ ತಮಗೊಪ್ಪಿಗೆಯಾಗುವಂತೆ ನಾನು ನಡೆದುಕೊಂಡರೆ, ಹೀಗೆ ಮುಚ್ಚುಮರೆಯಿಲ್ಲದೆ ಕೇಳಿದುದನ್ನು ಕ್ಷಮಿಸಿರಿ, ನನಗಾವ ಬಹುಮಾನವು ದೊರೆಯಬಹುದು?"

"ಹಾಗಾದರೆ ಲಕ್ಷ್ಯಗೊಟ್ಟು ಕೇಳಿರಿ; ಹಾಗೂ ನಾನು ನುಡಿದುದನ್ನು ಪೂರ್ಣವಾಗಿ ವಿಚಾರಮಾಡಿ ನೋಡಿರಿ. ಮಗುವು ಗತ್ಯಂತರವಿಲ್ಲದೆ ನಿಮ್ಮ ಕೈಸೇರಿದನಂತರ, ಅದು ಇನ್ನು ಮುಂದೆ ನಿಮ್ಮದೆಂದೇ ಭಾವಿಸಬೇಕು. ದತ್ತಕ ಮಾಡಿಕೊಂಡು ಅದನ್ನು ನಿಮ್ಮ ಮಗುವಾಗಿರಿಸಿಕೊಳ್ಳಬಹುದು; ನಿಮಗೆ ಬೇಕಾದ ಹೆಸರನ್ನು ಅದಕ್ಕಿಡಬಹುದು; ಅದು ನಿಮ್ಮಲ್ಲಿರುವುದು ಸಂಶಯಕ್ಕಾಸ್ಪದವಾಗದಂತೆ ತಕ್ಕ ಕಥೆಯೊಂದನ್ನು ಕಲ್ಪಿಸಬಹುದು;—ಈ ವಿಷಯದಲ್ಲಿ ನೀವೇನೇ ಮಾಡಲಿ, ನೀವೊಂದು ವಿಚಾರದಲ್ಲಿ ವಚನವೀಯಬೇಕು. ಅದರ ತಾಯಿತಂದೆಗಳಾರೆಂಬುದನ್ನು ಎಂದೂ ಶೋಧಿಸಲು ಯತ್ನಿಸಲಾಗದು. ಇವುಗಳನ್ನು ನೀವು ಸಂಪೂರ್ಣವಾಗೊಪ್ಪಿಕೊಂಡರೆ ೫೦,೦೦೦ ರೂಪಾಯಿಗಳು—"

"ಐವತ್ತು ಸಾವಿರವೇ?! ಅಬ್ಬಾ, ಅರ್ಧಲಕ್ಷವೇ?!"

"ಅಹುದು, ಐವತ್ತುಸಾವಿರ ರೂಪಾಯಿಗಳು, ಇಷ್ಟೇ

ಸಾಕಾಗುವುದಷ್ಟೇ ? "

"ಹಾಗಾದರೆ ನಾನೆಲ್ಲವನ್ನೂ ಒಪ್ಪಿದೆ. ಮುಂದೇನು ಹೇಳಿದರೂ ಅಭ್ಯಂತರವಿಲ್ಲ."

"ನಿಮಗೀಗ ಗೊತ್ತಿರುವ ಅಲ್ಪ ಸಂಗತಿಗಳನ್ನೂ, ಆ ಮಗುವಿನ ಮಾತೃವಿನ ವಿಷಯದಲ್ಲಿ ನಿಮಗುಂಟಾಗಬಹುದಾದ ಸಂಶಯಗಳೆಲ್ಲವನ್ನೂ ನೀವು ಅತ್ಯಂತ ಗುಪ್ತವಾಗಿಡಲಿಕ್ಕೆ ಬೇಕು. ಎಲ್ಲಿಯೇ ಆಗಲಿ, ಯಾವ ಸಂದರ್ಭದಲ್ಲಿಯೇ ಆಗಲಿ, ಅವಳನ್ನಿನ್ನು ಮುಂದೆ ನೀವು ಕಂಡದ್ದಾದರೆ, ಅವಳನ್ನು ನೀವು ಗುರುತಿಸಲು ಯತ್ನಿಸಲಿಕ್ಕೇ ಆಗದು."

"ಇದನ್ನೂ ನಾನೊಪ್ಪಿದೆ; ಇದರಂತೆಯೇ ದೇವ ರಾಣಿಗೂ ವರ್ತಿಸುವೆನು."

"ನನ್ನ ವಿಷಯದಲ್ಲಿಯೂ ಹಾಗೆಯೇ, ಯಾವಾಗಲೇ ಆಗಲಿ ಎಲ್ಲಿಯೇ ಆಗಲಿ ನಾವು ಸಂದರ್ಶಿಸಿದರೆ ಪೂರ್ಣ ಅಪರಿಚಿತರಂತಿರತಕ್ಕದು."

"ನಿಮ್ಮ ಅಕ್ಷರವೊಂದನ್ನೂ ಮೀರುವುದಿಲ್ಲ. ಇನ್ನೇನು ಬೇಕಾದರೂ ಹೇಳಬಹುದು."

"ಹೇಳುವುದೇನೂ ಉಳಿದಿಲ್ಲ. ಸಾಯಂಕಾಲದಲ್ಲಿ ೫೦ ಸಾವಿರವನ್ನು ಕೊಡುವೆನು; ಏಕೆಂದರೆ ನಾಳೆ ಇಂದುಮತಿ ಬಾಯಿಯನ್ನು ಕರೆದುಕೊಂಡು ಹೊರಡಲೇ ಬೇಕಾಗಿದೆ."

"ನಾಳೆಯೇ ! ಬಾಯಿ, ಇಲ್ಲಿ ನೋಡಿರಿ; ಹೊರಗಿನ ಹವೆಯು ಕ್ರೂರವಾಗಿದೆ ಇದು ಚಳಿಗಾಲದ ಯೌವನ ಕಾಲ."

"ನಮ್ಮ ಅವಸರವು ಏನನ್ನೂ ಲಕ್ಷಿಸುವಂತಿಲ್ಲ. ವೈದ್ಯರೇ, ನೀವಿನ್ನು ಹೋಗಿಬರಬಹುದು."

ಧುಂಡೀರಾಜನು ಹೆಚ್ಚು ಚರ್ಚಿಸಲಾಗಲಿಲ್ಲ. ಅವನತ್ತ ನಡೆದೊಡನೆಯೇ ಕಮಲೆಯು ಇಂದುಮತಿಯ ಬಳಿಗೆ ಪ್ರಫುಲ್ಲವದನೆಯಾಗಿ ಬರಲು ಇವಳಂತರ್ಗತವನ್ನವಳರಿ ದಳು.

ಊಟವಾದನಂತರ ಕಮಲೆಯು ಈ ಕೆಳಗಿನ ಒಕ್ಕಣಿಕೆ ಯುಳ್ಳ ಕಾಗದವೊಂದನ್ನು ಬರೆದಳು:

"ನಿನ್ನಿನ ರಾತ್ರಿಯಲ್ಲಿ —ಯು ಗಂಡುಮಗುವೊಂದನ್ನು ಅಕಾಲದಲ್ಲಿ ಪ್ರಸವಿಸಿದಳು. ಶಿಶುವು ಆರೋಗ್ಯವಾಗಿರು ವುದೆಂದು ವೈದ್ಯರು ಹೇಳುವರು. ಅದರ ವ್ಯವಸ್ಥೆಯನ್ನು ತೃಪ್ತಿಕರವಾದ ರೀತಿಯಲ್ಲಿ ಮಾಡಲಾಗಿದೆ. ಎಲ್ಲವೂ ಗೌಪ್ಯವಾಗಿರುವುದೆಂಬುದಕ್ಕಿಂತಲೂ ಹೆಚ್ಚು ವಿವರಿಸುವುದು ಈಗ ವಿಹಿತವಲ್ಲ. —ಯು ಎಂದಿಂತೆ ಸುಖವಾಗಿರುವಳು. ನಾಳೆ ನಾವು ರಾಮಪುರಿಗೆ ಹೊರಡುವೆವು. ನಿಮಗೆ ಶೀಘ್ರ ವಾಗಿ ಪತ್ರವನ್ನೂ ಬರೆಯಲಾಗುವುದು."

ಸಾಯಂಕಾಲದಲ್ಲಿ ಹಣವು ಕೈಸೇರಲು ತಾರೆಲೀಲೆಯರಿಗೆ ಅಮೌಲ್ಯಾಭರಣಗಳನ್ನು ಕಮಲೆಯು ಕೊಂಡುತಂದಳು. ಮೊದಮೊದಲು ಅವರೊಲ್ಲೆವೆಂದರೂ ಇಂದುಮತಿ ಕಮಲೆ ಯರ ನೆನಪುಳಿಯಲೆಂದು ಕೊನೆಯಲ್ಲಿ ಸ್ವೀಕರಿಸಬೇಕಾ ಯಿತು.

ಹಿಂದಿನ ರಾತ್ರಿಯಲ್ಲಿಯ ಘಟನೆಗಳನ್ನು ಅತಿ ಗೌಪ್ಯವಾ ಗಿಡಬೇಕೆಂದವರು ಬೇಡಿಕೊಳ್ಳಲು, ತಾರೆಯು ತಮ್ಮ ತಂದೆ ಯೊಬ್ಬನಿಗೆ ತಿಳಿಸುವುದಾಗಿಯೂ, ಅವನು ಅದನ್ನು ಅಪ ರಾಧವೆಂದೆಣಿಸನೆಂದೂ, ಈ ವಿಷಯಗಳನ್ನವನು ಎಂದೂ ಬಹಿರಂಗಪಡಿಸನೆಂದೂ ಹೇಳಿದಳು.

ಢುಂಡೀರಾಜನನ್ನು ಬರಮಾಡಿ ಹೇಳಿದಂತೆ ಹಣವನ್ನೂ ಕೊಡಲಾಯಿತು.

ಇಂದುಮತಿಯು ಕಂದನನ್ನು ನಿರ್ವಾಹವಿಲ್ಲದೆ ತೊರೆಯುವ ಕಾಲವು ಬಂದಿತು. ಈ ಅಲ್ಪಕಾಲದಲ್ಲಿಯೇ ಅವಳ ಅಂತಃಕರಣವು ಕರಗಿ ನಿರಪರಾಧಿಯಾದ ಶಿಶುವನ್ನು ತೊರೆಯಲಾರದ ಸ್ಥಿತಿಯಾಯಿತು.

ಮಾಲತಿಯು ಮಗುವನ್ನು ವೈದ್ಯನ ಮನೆಗೆ ಮುಟ್ಟಿಸಿ, ಈ ಹೊಸ ಅಪರಚಿತನಿಗಲ್ಲಿ ಯೋಗ್ಯ ಸ್ವಾಗತವನ್ನು ವೈದ್ಯನರಸಿಯು ಏರ್ಪಡಿಸಿರುವಳೆಂದು ವಿವರಿಸಲು ಇಂದುಮತಿಗೆ ಸ್ವಲ್ಪ ಸಮಾಧಾನವಾಯಿತು.

ಎಲ್ಲರೂ ಮರುದಿನ ಮುಂಜಾವಿನಲ್ಲೆದ್ದು ತಮ್ಮ ಕೃತಜ್ಞತೆಯನ್ನು ತಾರಲೀಲೆಯರಿಗೆ ವ್ಯಕ್ತಪಡಿಸಿ ಊರಿಗೆ ಹೊರಟರು; ಸಾಧ್ಯವಾದಷ್ಟು ಬೇಗನೆ ಇವರನ್ನು ಸಂದರ್ಶಿಸುವುದಾಗಿ ಕಮಲೆಯು ಭರವಸೆಯಿತ್ತಳು.

---

# ವಿಪತ್ಪರಂಪರೆಗಳು

“ ಅತ್ತ ಬಿದ್ದರೆ ಕೆರೆ, ಇತ್ತ ಬಿದ್ದರೆ ಬಾವಿ ” ಎಂಬಂತೆ ವೀರಪ್ಪನ ಸ್ಥಿತಿಯಾಗಿತ್ತು. ತಮ್ಮ ವರ್ತಕರ ಧಣಿಗಳನ್ನವನು ಈ ದಿನ ಬೆಳಗಿನಲ್ಲಿಯೇ ಕಾಣಬೇಕು. ಆದರೆ ಹಣ? ಹುಂಡಿ? ಸಾಯಂಕಾಲದವರೆಗೆ ತಡೆದರೆ ಸಂಶಯಾಸ್ಪದವಾಗುವುದು. ಈಗಲೇ ಹೋಗಿ ನಡೆದ ಅನಾಹುತಗಳನ್ನೊರೆದರೆ—ಅವರು ನಂಬುವ ಬಗೆ?

ಎಡವಿದ ಬೆರಳನ್ನು ಪುನಃ ಪುನಃ ಎಡವುವಂತೆ, ಹರಿದ ಅರಿವೆಯು ಹೆಚ್ಚು ಹೆಚ್ಚು ಹರಿಯುವಂತೆ, ಸ್ವಲ್ಪ ಸಾಲದ ಬಲೆಯಲ್ಲಿ ಬಿದ್ದವನು ಸಂಪೂರ್ಣವಾಗದರಧೀನನಾಗುವಂತೆ ಅಲ್ಪವಿಪತ್ತಿಗೊಳಗಾದವನು ವಿಪತ್ಪರಂಪರೆಗಳಿಗೀಡಾಗು ವನು. ಯಾವ ವರ್ತಕ ಧಣಿಗಳ ಸಂದರ್ಶನಾಲೋಚನೆ ಯಿಂದ ವೀರಪ್ಪನು ಭಯಭ್ರಾಂತನಾಗಿದ್ದನೋ ಅವರ ಲ್ಲೊಬ್ಬನಾದ ಶೇಷಯ್ಯಶೆಟ್ಟಿಯು ಅವಸರದಿಂದ ಬಂದು ಅವ ನೆದುರಿನಲ್ಲಿದ್ದೊಂದು ಪೀಠವನ್ನಲಂಕರಿಸಿದನು. ಹುಲಿಯ ಚಿತ್ರವನ್ನು ಕಂಡು ಹೆದರಿದವನ ಮುಂದೆ ನಿಜವಾದ ಹುಲಿ ಯೊಂದು ಬಂದು ನಿಂತಂತೆ, ವೀರಪ್ಪನ ಸ್ಥಿತಿಯಾಯಿತು. ಅವನು ತನ್ನ ಮನೋಭಾವನೆಗಳನ್ನು ಮುಚ್ಚಿಡಲು ಯತ್ನಿಸಿದರೂ ಅವು ಮೆಲ್ಲನೆ ಹೊರಸೂಸದಿರಲಿಲ್ಲ.

"ವೀರಪ್ಪಾ, ಆರೋಗ್ಯವಷ್ಟೆ? ನಿನ್ನ ಪತ್ರದ ಪ್ರಕಾರ ನೀನಿಲ್ಲಿಗೆ ನಿನ್ನೆಯ ಸಾಯಂಕಾಲದಲ್ಲಿ ಬರುವುದು ನಮ ಗೆಲ್ಲಾ ತಿಳಿದಿತ್ತು. ಈ ದಾರಿಯಲ್ಲಿ ಹೋಗುತ್ತಿದ್ದ ನಾನು ನಿನ್ನನ್ನು ಕಾಣಬಹುದೆಂದು ಭಾವಿಸಿ ಇಲ್ಲಿಗೆ ಬಂದೆನು."

"ಶೆಟ್ಟರೇ, ನಮಸ್ಕಾರ. ಬಡವನ ಮೇಲೆ ತಮ್ಮ ಉಪಕಾರವು ಬಹಳವಾಯಿತು; ಹೌದು, ನಾನು ಕೃತಜ್ಞ— ಸುಬ್ರಾಯಶೆಟ್ಟರು ಹೇಗಿದ್ದಾರೆ?"

"ಅವರೇ? ಚೆನ್ನಾಗಿದ್ದಾರೆ. ದೇಹಸ್ವಾಸ್ಥ್ಯವಿದೆ; ಮನಸ್ವಾಸ್ಥ್ಯವಿಲ್ಲ!"

"ಇದೇನು ಮತ್ತೆ?"

"ನಮ್ಮ ವ್ಯವಹಾರದಲ್ಲಿ ಭಯಂಕರ ಹಾನಿಯೊದಗಿದೆ. ಎಲ್ಲವನ್ನೂ ಕೊನೆಗೆ ವಿವರಿಸುವೆನು. ನೀನು ಸಂಭಾಷಣೆ

ಯನ್ನಿಲ್ಲಿಗೇ ಸಮಾಪ್ತಿಗೊಳಿಸಿ, ನಮ್ಮ ಹುಂಡಿ ಮೊದಲಾದು ವುಗಳನ್ನೆಲ್ಲಾ ಕೂಡಲೇ ಕೊಟ್ಟುಬಿಡು. ಇದರಿಂದ ತಲೆ ಯೆತ್ತಲವಕಾಶವು ದೊರೆಯುವಂತೆ ಸಾಸು ಮಾಡುವವ ನಿದ್ದೇನೆ."

"ಈಗಲೇ?"

"ಈ ಕ್ಷಣದಲ್ಲಿಯೇ. ಇತರ ಸಂಗತಿಗಳನ್ನು ಸುಬ್ರಾಯ ಶೆಟ್ಟರೊಡನೆ ಮಾತನಾಡಬಹುದು."

"ಸ್ವಲ್ಪ ತಡೆಯುವಂತಿಲ್ಲವೇ ರಾಯರೇ? ಏಕೆಂದರೆ—"

"ಓಹೋ, ಇದೇನಿದು?"

"ನನ್ನನ್ನು ಕೊಲ್ಲುವುದೂ ಕಾಪಾಡುವುದೂ ಈಗ ನಿಮ್ಮನ್ನೇ ಕೂಡಿದೆ. ನಾಳಿನ ವರೆಗೆ ಕೊನೆಗೆ ಈ ರಾತ್ರಿ ಹತ್ತು ಗಂಟೆಯವರೆಗೆ—ಕಾಸನ್ನು ಸಹ ಕೊಡಲಾರದವ ನಾಗಿದ್ದೇನೆ."

"ಏಕೆ, ಕೊಡುವುದಿಲ್ಲವೇ? ಸ್ವಾಮಿ, ಎಲ್ಲಿ ಸ್ವಲ್ಪ ಮಾತನಾಡಿರಿ. ಹಾಗಾದರೆ ಇದರಲ್ಲೇನೋ ಇದೆ!"

"ಇದೆ ಸ್ವಾಮಿ, ಇದೆ. ಇದಕ್ಕಾಗಿ ದಯವಿಟ್ಟು ಕೋಪಿಸಬೇಡಿ. ಇದು ನನ್ನ ಅಪರಾಧವಲ್ಲ. ದರೋಡೆ ಯಾಯಿತು."

"ಸುಲಿಗೆಯೇ? ಇದೊಂದು ಕಟ್ಟುಕಥೆಯಲ್ಲವಷ್ಟೇ? ಇದನ್ನು ಮೊಟ್ಟಮೊದಲೇ ನೀನೇಕೆ ಹೇಳಲಿಲ್ಲ?"

"ಇದೆಂದಿಗೂ ಸಟೆಯಲ್ಲ; ದಿಟ. ನಿಮಗೆ ಸಿಟ್ಟುಬರುವು ದೆಂದು ಹೆದರಿ ಮೊದಲಿದನ್ನು ಹೇಳಲಿಲ್ಲ. ಕಳ್ಳನು ಹುಂಡಿಯೇ ಮೊದಲಾದುವುಗಳನ್ನು ನನ್ನಿಂದ ೫೦೦ ರೂಪಾಯಿಗಳನ್ನು ತೆಗೆದುಕೊಂಡು ಈ ರಾತ್ರಿಯಲ್ಲಿ ಹಿಂದಕ್ಕೆ

ಕೊಡುವನು. ”

ಶೇಷಯ್ಯಶೆಟ್ಟರು ಪೋಲೀಸ್ ಅಧಿಕಾರಿಗಳ ಸಲಹೆಯನ್ನು ಕೇಳಲು ವೀರಪ್ಪನನ್ನು ಕೂಡಲೆ ಕರೆದೊಯ್ದರು. ದರೋಡೆಖೋರನ ಬೆದರಿಕೆಗಳಲ್ಲಿ ತಥ್ಯವಿಲ್ಲದಿಲ್ಲವೆಂದು ವೀರಪ್ಪನಿಗೆ ಸಂಪೂರ್ಣವಾಗಿ ಮನವರಿಕೆಯಾಗಿತ್ತು. ಆದರೂ ಈಗ ತನ್ನ ಒಡೆಯನನ್ನು ಅನುಸರಿಸದಿರುವುದು ಹೆಚ್ಚಿನ ಆಪತ್ತೆಂದು ತಿಳಿದು ಅವನು ಮರುಮಾತಾಡಲಿಲ್ಲ. ಹೆಚ್ಚಿನ ಗಂಡಾಂತರದ ಮುಂದೆ ಕಡಿಮೆಯದರ ಮಹತ್ವವು ಮಾಯವಾಗುವುದು. ಕ್ರೂರವ್ಯಾಘ್ರವನ್ನು ನೋಡಿ ಒಬ್ಬನು ಓಡಿಹೋಗಬಹುದು; ಆದರೆ ಮುಂದೆಡೆಯಿಲ್ಲದಂತೆ ದಾವಾಗ್ನಿಯು ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿಬಿಟ್ಟಿರಲು ಅವನಾಗ ಮುಂದೆ ನುಗ್ಗಿ ವ್ಯಾಘ್ರವನ್ನಿರಿದುಬಿಡುವನು.

ಚೌಡಿ ಓಣಿಯಲ್ಲಿ ವೀರಭದ್ರನೆಂಬ ಪೋಲಿಸ್ ಅಧಿಕಾರಿಯಿದ್ದನು. ಶೇಷಯ್ಯಶೆಟ್ಟರು ಅವನಿಗೆಲ್ಲವನ್ನೂ ವಿವರಿಸಿದರು.

ವೀರಪ್ಪನು ಕಳ್ಳನ ಆಕೃತಿಯನ್ನೂ ತಾನವನನ್ನು ಕಂಡ ಸ್ಥಳವನ್ನೂ ತಿಳಿಯಪಡಿಸಲು “ ನಮ್ಮ ಸ್ವತ್ತು ನಿನ್ನ ವಶದಲ್ಲಿದ್ದಾಗ ಅಲ್ಲೇತಕ್ಕೆ ಹೋಗಿದ್ದೆ ? ” ಎಂದು ಶೆಟ್ಟರು ಆಕ್ರೋಶಮಾಡಿದರು.

ನಿರ್ವಾಹವಿಲ್ಲದೆ ವೀರಪ್ಪನು ಸಾಹಸಮಯವಾದ ಹಿಂದಿನ ರಾತ್ರಿಯ ಘಟನೆಗಳೆಲ್ಲವನ್ನೂ ಸ್ಪಷ್ಟಪಡಿಸಿ ತನ್ನ ತಲೆಯ ಮೇಲಿನ ಭಾರವನ್ನು ಕಳೆದುಕೊಂಡವನಂತಾಗಲು, ವೀರಭದ್ರನು ವೀರಪ್ಪನ ಮಾತಿನಲ್ಲಿ ಸಂಶಯಕ್ಕಾಸ್ಪದವಿಲ್ಲವೆಂದೂ ಚೋರಗ್ರಹಣತಂತ್ರ ವಿಶಾರದನಾದ ತನ್ನ ಮೂಗಿಗೆ ತುಪ್ಪ

ವನ್ನು ಹಚ್ಚಿರುವ ಪ್ರತಾಪರುದ್ರನ ಕೆಲಸವಿದೆಂದೂ, ಇವರಿಗೆ ಸಹಾಯಕಳಾದ ಆ ಸ್ತ್ರೀಯನ್ನು ಪೋಲೀಸರು ನರರಕ್ಕಸಿಯೆಂಬ ಹೆಸರಿನಿಂದ ಕರೆಯುತ್ತಿರುವರೆಂದೂ, ಈಗೆರಡು ಮೂರು ವರ್ಷಗಳ ಹಿಂದೆ ನರರಾಕ್ಷಸನಾದ ಅವಳ ಗಂಡನು ಗಲ್ಲಿಗೇರಿಸಲ್ಪಟ್ಟನೆಂದೂ, ಶೀಷಯ್ಯನಿಗೆ ತಿಳಿಯಹೇಳಿದನು.

"ಇಂತಹ ನೀಚರ ಗುಂಪನ್ನು ನಿರ್ನಾಮ ಮಾಡುವು ದೊಂದು ಸಮಾಜಸೇವೆಯೆನಿಸುವುದರಿಂದ ಈ ಕೆಲಸದಲ್ಲಿ ವೀರಪ್ಪನು ನಿಮಗೆ ಸಹಾಯಮಾಡುವನು. ಅವನು ಅವಿ ಚಾರಿಯಾಗಿ ನಿನ್ನೆ ನಡೆದುದನ್ನು ನಾವು ಕ್ಷಮಿಸುವೆವು" ಎಂದು ಶೆಟ್ಟರೆನ್ನಲು, ಒಳಗೆ ಅಧೈರ್ಯವಿದ್ದರೂ ಹೊರಗೆ ಧೈರ್ಯವನ್ನು ಪ್ರಕಟಿಸಿ ವೀರಪ್ಪನು "ಎಲ್ಲ ವಿಧದಿಂದಲೂ ಸಹಾಯಮಾಡುವೆನು" ಎಂದನು.

"ಈ ಪ್ರತಾಪರುದ್ರನನ್ನು ಹಿಡಿದುಕೊಟ್ಟವರಿಗೆ ೧೦೦೦ ರೂ. ಗಳ ಬಹುಮಾನವಿದೆ. ಇಗೋ ಈ ಪತ್ರವನ್ನೋದಿ ನೋಡಿರಿ" ಎಂದು ವೀರಭದ್ರನು ವೀರಪ್ಪನಿಗೊಂದು ಪತ್ರವನ್ನಿತ್ತನು.

"ಅದೀಗ ಸರಿ."

"ಹಾಗಾದರೆ ಗೊತ್ತುಮಾಡಿದ ಗಂಟೆಗೆ ನೀವಲ್ಲಿಗೆ ಹೋಗಿ ಅವಳನ್ನು ಕಾಣಬೇಕು, ಮತ್ತು ಒಂದು ಮಹತ್ವದ ಕೆಲಸದ ಸಲುವಾಗಿ ಪ್ರತಾಪರುದ್ರನನ್ನು ಭಿಕ್ಷುಕ ಸಂಘಕ್ಕೆ ಹೋಗಿ ಸಂದರ್ಶಿಸಲೇಬೇಕಾಗಿದೆಯೆಂದು ಆ ನರರಾಕ್ಷಸಿಗೆ ತಿಳಿಸಬೇಕು. ಅವನಲ್ಲೆಲ್ಲಿಯಾದರೂ ಇದ್ದರೆ ಅವಳು ಬಹುಶಃ ನಿಮ್ಮನ್ನಲ್ಲಿಗೆ ಕೂಡಲೇ ಕರೆದುಕೊಂಡು ಹೋಗುವಳು; ಅವನ

ಲ್ಲಿರದಿದ್ದರೆ ಸ್ಮಶಾನಮಾರ್ಗದಲ್ಲಿಯ ಅವರ ಸ್ಥಳಕ್ಕೆ ಹೋಗಬೇಕಾಗುವುದು. ಹೇಗಿದ್ದರೂ ಭಿಕ್ಷುಕ ಸಂಘಕ್ಕೆ ನೀವು ಹೋಗಲಿಕ್ಕೇಬೇಕು; ಉಳಿದುದು ನನ್ನ ಕೆಲಸ."

"ನಾನೊಬ್ಬನೇ ಹೋಗತಕ್ಕುದೋ, ಹಾಗಾದರೆ?"

"ಹೌದೇ ಹೌದು. ಸೈನ್ಯವನ್ನು ಕಟ್ಟಿಕೊಂಡಲ್ಲಿಗೆ ಹೋಗುವುದೆಂಥಾ ಮೂರ್ಖತನ! ಅವರೆಲ್ಲರೂ ಕ್ಷಣದಲ್ಲಿಯೇ ಚದುರಿಬಿಡುವರು. ನೀವು ಹೆದರಬೇಡಿ. ನಿಮ್ಮ ಸಹಾಯಕರು ನಿಮ್ಮಿಂದ ಬಹು ದೂರದಲ್ಲಿರುವುದಿಲ್ಲ."

"ಪ್ರತಾಪರುದ್ರನು ಭೆಟ್ಟಿಯಾದನಂತರ?"

"ನೀವು ದೊಡ್ಡ ವ್ಯವಹಾರಸ್ಥರಲ್ಲಿರುವಿರೆಂದೂ, ದುಡ್ಡಿನಡಚಣಿಯ ಮೂಲಕ ಸುಲಿಗೆಗಾರರನ್ನು ಕೂಡಿಕೊಳ್ಳಲು ಸಿದ್ಧರಾಗಿರುವಿರೆಂದೂ, ಏನಾದರೂ ಕಥೆಯನ್ನು ಕಟ್ಟಿ ಹೇಳಿದರಾಯಿತು."

ಶೇಷಯ್ಯಶೆಟ್ಟರು ಕೆಲಕಾಲಾನಂತರ ಕೆಲವು ರೂಪಾಯಿಗಳನ್ನು ವೀರಭದ್ರನ ಕೈಯಲ್ಲಿಟ್ಟು ವೀರಪ್ಪನೊಡನೆ ಹೊರ ಹೊರಟರು.

---

# ನರರಕ್ಕಸಿ

ವೀರಪ್ಪನು ಕಾಳೀಘಾಟಿಗೆ ಬಂದಾಗ ರಾತ್ರಿ ಒಂಬತ್ತು ಗಂಟೆಯಾಗಿತ್ತು. ಧನುರ್ಮಾಸವು ಪ್ರಾಯದ ಶಿಖರವನ್ನೇರಿದ ಕಾಲವಾದುದರಿಂದ ಚಳಿಯು ಸಹಿಸಲಾಗದಂತಿತ್ತು. ಅಲ್ಲಿದ್ದೊಂದೇ ಫಲಾಹಾರದ ಅಂಗಡಿಯನ್ನು ವೀರಪ್ಪನು

ಪ್ರವೇಶಿಸಿ, ಶೈತ್ಯವನ್ನೀಗಿಸುವ ತಿನಸುಗಳನ್ನು ತಿನ್ನಲಾರಂಭಿಸಿದನು. ಸ್ವಾಭಾವಿಕವಾಗಿ ಅವನು ತಿರುತಿರುಗಿ ನೋಡುತ್ತಿರಲು ಮೂಲೆಯಲ್ಲಿದ್ದ ವೀರಭದ್ರನ ಮೋಟಾರ ದೀಪಗಳಂತಹ ಕಣ್ಣುಗಳು ಹೊಳೆದುವು. ಪರಸ್ಪರರು ನೋಡಿದೊಡನೆಯೇ ಅವನತ್ತ ತಿರುಗಲು ರೂಪವನ್ನು ಬದಲಿಸಿ ಬಂದಾ ವೀರಭದ್ರನಿಗೆ ಮಾತನಾಡುವುದು ಸರಿದೋರದೆಂದು ಚಿಂತಿಸಿ, ವೀರಪ್ಪನೂ ಮೆಲ್ಲನೆದ್ದು ಬೀದಿಗೆ ಬಂದನು.

ಸಮೀಪದಲ್ಲಿದ್ದ ಸೇತುವೆಯ ಬಳಿ ನಡುಹರೆಯದ ಕರಿಯ ಸೀರೆಯನ್ನುಟ್ಟ ಮನೋಹರೆಯೊಬ್ಬಳು ತನ್ನನ್ನೇ ನೋಡುತ್ತಿರುವಳೆಂದು ವೀರಪ್ಪನು ಅರಿತನು. ಅವನತ್ತ ತಿರುಗಿದೊಡನೆಯೇ ಅವಳು ಅತಿಲಜ್ಜೆಯಿಂದ ಮೇಲೆತ್ತಿ ಹಿಡಿದಿದ್ದ ದೀಪವನ್ನು ಕೆಳಗಿಳಿಸಿದಳು.

ವೀರಪ್ಪನು ಅವಳ ಬಳಿಗೆ ಮೆಲ್ಲನೆ ಬಂದು ಸಂಭಾಷಿಸಲಾರಂಭಿಸಿದನು.

“ಸುಂದರೀ, ಸ್ವಲ್ಪ ತಡೆ. ನೀನಾರನ್ನು ಹುಡುಕುತ್ತಿರುವೆ?”

“ನನಗೊಂದು ಸಾಮಾನು ಸಿಕ್ಕಿದೆ; ಅದಾರದೊ ತಿಳಿದಿಲ್ಲ.”

“ಹಾಗಾದರೆ, ಸಾಮಾನುಗಳು ನನ್ನವು. ನಿಮಗೆ ಕೊಡಲು ೫೦೦ ರೂ. ಗಳನ್ನು ತಂದಿದ್ದೇನೆ. ಪ್ರತಾಪರುದ್ರನು—”

“ಹಾಗಾದರೆ ಸರಿ, ನೀವು ನನ್ನೊಡನೆ ಬನ್ನಿ.”

ಅವಳೊಂದು ಸಂದಿಯಲ್ಲವನನ್ನು ಕರೆದೊಯ್ದು, ಹಣದ ಚೀಲವನ್ನವನಿಂದ ತೆಗೆದುಕೊಂಡು, ಅವುಗಳನ್ನು ಪರೀಕ್ಷಿಸಿ

ನೋಡಿ, ಅನಂತರ ಕಾಗದಪತ್ರಗಳ ಕಟ್ಟೊಂದನ್ನು ವೀರಪ್ಪನ ವಶಪಡಿಸಿದಳು. ವೀರಪ್ಪನು ಕಾಗದಪತ್ರಗಳೆಲ್ಲವೂ ಸರಿಯಾಗಿರುವುವೆಂದು ನುಡಿವಕೂಡಲೇ ಅವಳು ಹೊರಡಲನುವಾದಳು.

ವೀರಪ್ಪನವಳನ್ನು ತಡೆದು ನುಡಿದನು—

"ನಾನೀಗಲೇ ಪ್ರತಾಪರುದ್ರನನ್ನು ನೋಡಬೇಕು. ಈ ದಿನ ಭಿಕ್ಷುಕ ಸಂಘದವರೆಗೂ ಹೋಗಿಬರಲೇಬೇಕೆಂದು ನಾನು ನಿಶ್ಚಯಿಸಿರುವೆನು."

ರಮಣಿಯು ಸಂಶಯಯುಕ್ತಳಾಗಿ ತನ್ನ ತೀಕ್ಷ್ಣಕಟಾಕ್ಷವನ್ನು ಮಿಂಚಿನಂತೆ ಬೀರಿ, ವೀರಪ್ಪನ ಮೋರೆಯಲ್ಲಾವ ಬದಲಾವಣೆಯೂ ಕಂಡುಬರದಿರಲು, ಹೀಗೆ ನುಡಿದಳು.- "ಒಳ್ಳೆಯದು, ನಾನಾ ಮಾರ್ಗದಲ್ಲಿಯೇ ಹೋಗಬೇಕಾಗಿದೆ. ನೀನು ಹಿಂಬಾಲಿಸುವುದಕ್ಕಡ್ಡಿಯಿಲ್ಲ."

"ತರುಣಿಯರು ಕರುಣಿಗಳೆಂಬುದು ಸುಳ್ಳಲ್ಲ."

ಇಬ್ಬರೂ ತಿರುತಿರುಗಿ ಅಡ್ಡದಾರಿಗಳಲ್ಲಿ ವೇಗವಾಗಿ ಹೋಗುತ್ತಿದ್ದರು. ಅಂಗಡಿಯ ಕಿಟಕಿಯಿಂದ ಬರುವ ದೀಪದ ಬೆಳಕನ್ನುಳಿದು ಬೇರೆ ಬೆಳಕಿರಲಿಲ್ಲ. ಕಾಲುವೆಗಳ ಕೊಳಕುವಾಸನೆಯು ವಿಪರೀತವಾಗಿತ್ತು. ನಿಂತ ನೀರು ಮತ್ತು ಕೊಳಚೆಗಳು ಸರಿಯಾಗಿ ಕಾಣದಿದ್ದುದರ ಫಲವಾಗಿ ವೀರಪ್ಪನು ಜಾರಿಬೀಳಲು ಪಾದದಿಂದ ನೆತ್ತಿಯವರೆಗೂ ಕೆಸರಾಯಿತು. ಗೋರಿಯಲ್ಲಿಯ ನಿಶ್ಶಬ್ದತೆಯು ಕೇರಿಯಲ್ಲೆಲ್ಲಿಯೂ ವ್ಯಾಪಿಸಿತ್ತು. ವೀರಪ್ಪನೊಮ್ಮೆ ಕಲ್ಲನ್ನೆಡಹುವನು; ಒಮ್ಮೆ ತಿಪ್ಪೆಯನ್ನು ತುಳಿಯುವನು; ಒಮ್ಮೆ ನಾಯಿಕತ್ತೆಗಳ ಮೇಲೆ ಕಾಲಿಡುವನು; ಒಮ್ಮೆ ಗೋಡೆಗೆ ತಲೆಹಾಯಿಸುವನು.

ಹೆಚ್ಚು ಹೆಚ್ಚು ಹೋದಂತೆಲ್ಲಾ ಹೆಚ್ಚು ಹೆಚ್ಚು ಭೀಕರ ಕತ್ತಲೆಯಾಯಿತು; ರಾತ್ರಿಯಾದುದರಿಂದ ಮನೆಗಳೆಲ್ಲವೂ ಭದ್ರವಾಗಿ ಮುಚ್ಚಲ್ಪಟ್ಟಿದ್ದುವು.

ವೀರಪ್ಪನು ಬಂದ ದಾರಿಯನ್ನರಿಯಬೇಕೆಂದು ಮಾಡಿದ ಯತ್ನಗಳೆಲ್ಲವೂ ಭಗ್ನವಾದುವು. ದುಷ್ಟರಿಗೆ ಕಳವು, ಕೊಲೆ, ದರೋಡೆಯೇ ಮೊದಲಾದ ಕೃತ್ಯಗಳನ್ನುಮಾಡಲು ಇಷ್ಟು ಅನುಕೂಲವಾದ ಸ್ಥಳವಿನ್ನೆಲ್ಲಿಯೂ ಸಿಕ್ಕದೆಂದುಕೊಂಡನು.

ಅವನಾ ದಾರಿಯು ಬಹುಭಯಾನಕವೆನ್ನಲು, ಅದು ಅಪರಿಚಿತರಿಗೆ ಹಾಗೆನಿಸುವುದೆಂದೂ ತನಗಾ ದಾರಿಯಲ್ಲಿಯ ಪ್ರತಿ ಹೆಜ್ಜೆಯೂ ಹೊಸತಲ್ಲನೆಂದೂ ಅವಳು ಹೇಳಿದಳು.

ತಾವು ಹೋಗುತ್ತಿರುವುದೆಲ್ಲೆಂದು ವೀರಪ್ಪನು ನಡು ನಡುವೆ ಕೇಳುತ್ತಿರಲು ಅವಳು ಅನೇಕ ಹೊಸ ಮಾರ್ಗಗಳ ಹೆಸರನ್ನೊರೆದಳು.

ಕೊನೆಗೆ ಸ್ಮಶಾನಮಾರ್ಗಕ್ಕೆ ತಿರುಗುವ ಚೌಕಿನ ಬಳಿಯಲ್ಲಿ ಅವಳು ವೀರಪ್ಪನನ್ನು ಮಗ್ಗುಲಲ್ಲಿದ್ದೊಂದು ಬಾಗಿಲಬಳಿಗೆ ಎಳೆದುಕೊಂಡು, "ಸ್ವಲ್ಪ ತಾಳಿ. ನಾವಿಲ್ಲಿ ಕೆಲವು ನಿಮಿಷಗಳವರೆಗೆ ನಿಲ್ಲುವಾ" ಎಂದಳು. ಹೀಗೇಕೆಂದು ಅವನು ಕೇಳಲು ಅವಳು "ಹುಶ್" ಎಂದು ಮೂಗಿನಮೇಲೆ ಬೆರಳಿಟ್ಟುಕೊಂಡಳು.

ಪುನಃ ಮೊದಲಿನಂತೆ ಶಾಂತತೆಯು ಹಬ್ಬಿದರೂ ಗೂಗೆಗಳ ಕಠೋರ ಧ್ವನಿಗಳಿಂದಾಗಾಗ್ಗೆ ಅದು ಭಗ್ನವಾಗುತ್ತಿತ್ತು. ಕೆಲಕಾಲದಲ್ಲಿಯೇ ಹೆಜ್ಜೆಯ ಸಪ್ಪಳವು ಹೆಚ್ಚು ಹೆಚ್ಚು ಸ್ಪಷ್ಟವಾಗಿ ಕೇಳಿಬರಲು, ಪುಷ್ಪದಂತೆ ಅತಿಕೋಮಲ ಕಾಯಳಾದರೂ ಪಾಷಾಣಕ್ಕಿಂತಲೂ ಕಠೋರ ಹೃದಯ

ಪೆಳ್ಳಾ ಮೋಹಿನಿಯು ವೀರಪ್ಪನನ್ನು ಸಮೀಪದಲ್ಲೆಳೆದು ಕೊಂಡು ಅವನ ಬಾಯಿಯಮೇಲೆ ಕೈಯಿಟ್ಟಳು. ಕ್ಷಣಾರ್ಧ ದಲ್ಲಿ ಮನುಷ್ಯಾಕೃತಿಯೊಂದು ಇವರ ಹತ್ತಿರವೇ ಹಾದು, ಸ್ಮಶಾನಮಾರ್ಗದಕಡೆಗೆ ಹೋದಂತಾಯಿತು.

"ವೀರಪ್ಪಾ, ನಾವು ಇನ್ನೂ ಕೆಲವು ನಿಮಿಷಗಳವರೆಗೆ ಇಲ್ಲಿಯೇ ಇರೋಣ" ಎಂದವಳು, ವೀರಪ್ಪನು ಅವಳಿಂ ದೊಂದು ಮೊಳದೂರದಲ್ಲಿದ್ದರೆ ಏನೂ ಅರ್ಥವಾಗದಷ್ಟು ಅತಿ ಮೆಲ್ಲನೆ ನುಡಿದಳು.

ಅಲ್ಪಾವಧಿಯಲ್ಲಿಯೇ ಆ ಮಾರ್ಗದಲ್ಲಿನ್ನೊಬ್ಬನು ಹಾದು, ಮೊದಲಿನವನು ತಿರುಗಿದೆಡೆಯಲ್ಲಿಯೇ ತಿರುಗಿ ಹೋಗಲು, ನರರಕ್ಕಸಿಯು ವೀರಪ್ಪನು ಮುಂದಡಿಯಿಡಲಾಗದೆಂದುಸುರಿ ದಳು.

ಅವಳಿಗನುಮಾನವುಂಟಾದುದನ್ನರಿತು, ಪ್ರತಾಪರುದ್ರನ ಕ್ರೂರಸ್ವಭಾವವನ್ನೂ, ತಾನು ಹೋಗುವ ಸ್ಥಳದ ಭೀಕರತೆ ಯನ್ನೂ ವೀರಪ್ಪನೊಮ್ಮೆ ಕಲ್ಪಿಸಲು ಎದೆಯೊಡೆಯಿತು. ಆದರೂ ಅದನ್ನು ವ್ಯಕ್ತಪಡಿಸದಂತಿದ್ದನು.

ನೀತಲ್ಲಿಯೇ ನಿಂತು ಕಾಲಹರಣಮಾಡುವುದು ತನ್ನ ಮನ ಸ್ಸಿಗೆ ಬರುವುದಿಲ್ಲವೆಂದು ವೀರಪ್ಪನೆನ್ನುವುದರೊಳಗಾಗಿ, ಪದಾಘಾತಗಳು ಕೇಳಿಬರುವುವಾದುದರಿಂದ ಬಾಯಿ ಮುಚ್ಚಲೇಬೇಕೆಂದು ರಮಣಿಯು ಆಜ್ಞಾಪಿಸಿದಳು. ಆದರೂ ಅವನೇನೋ ನುಡಿಯಹೋಗಲು ಅವಳೊಮ್ಮೆ ಗುದ್ದಿ ಕಿವಿಯಭಾಗದಲ್ಲಿ ತನ್ನ ಪಿಸ್ತೂಲನ್ನು ಒತ್ತಿಹಿಡಿದಳು. ವೀರಪ್ಪನು ಮಗ್ಗುಲಿನ ಗೋಡೆಗೆ ಒರಗಿಕೊಳ್ಳದಿದ್ದರೆ ನೆಲಕ್ಕುರುಳಿಬಿಡುತ್ತಿದ್ದನು. ಇಷ್ಟರಲ್ಲಿನ್ನೊಬ್ಬನು ಸ್ಮಶಾನ

ಮಾರ್ಗಕ್ಕೆ ತಿರುಗಿಹೋದನು.

"ಇಗೋ! ನೀನಿನ್ನು ಏನಾದರೂ ಶಬ್ದ ಮಾಡಿದರೆ ನಾನು ನಿನ್ನಲ್ಲಿ ಸಂದೇಹಪಟ್ಟು ಕೂಡಲೇ ಈ ಪಿಸ್ತೂಲಿನಿಂದ ನಿನ್ನ ತಲೆಬುರುಡೆಯನ್ನೊಡೆಯುವೆನು. ನನ್ನನ್ನು ಕಚ್ಚಬಂದ ಹುಚ್ಚು ನಾಯಿಯನ್ನಿರಿಯುವುದು ನ್ಯಾಯವಾದುದು ಇನ್ನೂ ಸ್ವಲ್ಪ ನಾವಿಲ್ಲಿಯೇ ಸುಮ್ಮನಿರಬೇಕು" ಎಂದಾ ಸುಂದರಿಯು ಹೇಳಲು, ವೀರಪ್ಪನು ಇಂಥಾ ಲಜ್ಜಾಯುಕ್ತಳಾದ ಕೋಮಲೆಯು ಇಷ್ಟು ಭಯಂಕರ ಕೃತ್ಯಗಳಿಗೆ ಹೇಗೆ ಮನಸ್ಸುಹಾಕುವಳೆಂದು ಬೆರಗಾದನು. ವೀರಪ್ಪನಿಂತು ದಿಗ್ಭ್ರಾಂತನಾಗಿರಲು ಸುಮಾರು ಹತ್ತು ನಿಮಿಷಗಳ್ ಕಳೆದುಹೋದುವು. ಆಗಾ ರಮಣಿಯು ಅವನಿಗೆ ಮುಂದಡಿಯಿಡಹೇಳಿದಳು.

ವೀರಪ್ಪನು ಹಿಂದಿನ ಪ್ರಸಂಗಗಳಿಂದ ಬಲು ಹೆದರಿ ಅವಳಿಂದ ತಪ್ಪಿಸಿಕೊಳ್ಳಬೇಕೆಂದು ನೆನೆದನು. ಕೂಡಲೇ ಅನೇಕ ವಿಚಾರಗಳು ಮುಂದೆ ನುಗ್ಗಿಬರಲು ಅದು ಸರಿಯಲ್ಲನೆಂದು ತೋರಿತು. ಶೇಷಯ್ಯಶೆಟ್ಟರ ಕೋಪಕ್ಕೆ ನಡುಗಿದನು—ತನ್ನ ಕೆಲಸವು ಕೈಬಿಡುವುದೆಂದು ಬೆದರಿದನು—ಪ್ರತಾಪರುದ್ರನನ್ನು ಹಿಡಿಯುವ ಕಾರ್ಯದಲ್ಲಿ ಸಹಾಯ ಮಾಡುವುದರಿಂದ ಬಹುಮಾನದಲ್ಲೊಂದು ಭಾಗವು ಸಿಗುವುದೆಂದು ಆಶಿಸಿದನು—ಮುಖ್ಯವಾಗಿ ಓಡುವುದರಿಂದ ನರರಕ್ಕಸಿಗೆ ಸಂಶಯವುಂಟಾಗಿ ಪಿಸ್ತೂಲಿನಿಂದ ಹೊಡೆದುಬಿಡುವಳೆಂದು ನಡುಗಿದನು.

ಇವನೀ ಪರಿಯಲ್ಲಿ ವಿಚಾರಾಸಕ್ತನಾಗಿರಲು ಆ ರಮಣಿಯು ತಮ್ಮ ನಿರ್ದಿಷ್ಟ ಸ್ಥಳವು ಬಂದಿತೆಂದು ಹೇಳಿ ಒಂದು

ನೆಲಮನೆಯ ಬಾಗಿಲನ್ನು ತೆರೆದಳು.

---

# ಅಪರಿಚಿತನೂ ತಾರೆಯೂ

ಇಂದುಮತಿಯೂ ಕಮಲೆಯೂ ತಮ್ಮ ಪರಿವಾರದೊಡನೆ ಹೊರಟುಹೋಗಿ ಹಲವು ತಾಸುಗಳಾಗಿದ್ದುವು. ಆಗೊಂದು ಕುದುರೆಯ ಗಾಡಿಯು ಬಂದು ತಾರೆಲೀಲೆಯರು ಹಾಡುತ್ತಾ ಕುಳಿತಿದ್ದ ಕೋಣೆಯ ಮುಂದೆ ನಿಂತಿತು. ಮಧ್ಯಮ ವಯಸ್ಸಿನ ವ್ಯಕ್ತಿಯೊಂದವರಿಂದಿಳಿದುಬಂದು ತರುಣಿಯ ರೊಡನೆ ಮಾತನಾಡತೊಡಗಿತು.

" ಬಾಯಿ, ನನ್ನನ್ನು ಭೀಮರಾಯರು ಕಳಿಸಿದ್ದಾರೆ. ಅವರು ಆ ರಾತ್ರಿ ಆಕಸ್ಮಿಕವಾಗಿ ನಿಮಗಾರಿಗೇನೂ ಹೇಳದೆ ಹೊರಟುಹೋದುದಕ್ಕಾಗಿ ತಮ್ಮ ಪರವಾಗಿ ಕ್ಷಮೆಯನ್ನು ಬೇಡಲು ನನಗಾಜ್ಞಾಪಿಸಿರುವರು. ನಿಮ್ಮೆಲ್ಲರನ್ನು ನೋಡುವ ಸುಸಂಧಿಯು ದೊರೆತಾಗ ಅವರದಕ್ಕೆ ಕಾರಣವನ್ನೊರೆವ ರಂತೆ. ಈ ಉತ್ತಮ ಪೀತಾಂಬರಗಳನ್ನು ಕೃತಜ್ಞತಾಪೂರ್ವ ಕವಾಗಿ ಅವರು ನಿಮಗೆ ಕಳುಹಿರುವರು. ಈದಿನ ಸಂಜೆಯಲ್ಲಿ ನಿಮಗನುಕೂಲವಿದ್ದರೆ ಅವರೇ ಇಲ್ಲಿಗೆ ಬಂದು, ನಾನೀ ಮೊದಲು ಹೇಳಿದಂತೆ ಸರಿಯಾದ ಕಾರಣಗಳನ್ನು ವಿವರಿಸಿ ಹೋಗುವರಂತೆ. "

ತಾರೆಗೇಕೋ ಹೃದಯವು ಉಕ್ಕಿತು. " ಭೀಮರಾಯ ರಿಗೆ ನಮ್ಮ ನಮಸ್ಕಾರಗಳನ್ನು ಹೇಳಿರಿ. ಅವರ ಅನ್ಘ್ಯ ವಾದ ಉಡುಗರೆಯನ್ನು ನಾವು ಅಂಗೀಕರಿಸಿದರೂ ನಮ್ಮ ಅತ್ಯಲ್ಪಸಹಾಯಕ್ಕೆ ಪ್ರತಿಫಲದ ಆವಶ್ಯಕತೆಯೇನೂ ಇರ

ಲಿಲ್ಲವೆಂದು ತಿಳಿಸಿರಿ. ನಮಗೀ ದಿನ ಅವರನ್ನು ಸಂದರ್ಶಿಸಲು ಅಭ್ಯಂತರವೇನಿಲ್ಲದಿದ್ದರೂ ಆ ರಾತ್ರಿಯಲ್ಲವರು ಆಕಸ್ಮಿಕವಾಗಿ ಹೋದುದರ ಕಾರಣವನ್ನರುಹುವ ಸಲುವಾಗಿ ಇಲ್ಲಿಯವರೆಗೆ ಬರುವ ಶ್ರಮವನ್ನು ಅವರು ತೆಗೆದುಕೊಳ್ಳುವುದು ಸರಿಯಲ್ಲ" ಎಂದಳು.

"ತಾಯಿ, ನೀವೆಂದಂತೆಯೇ ಅವರಿಗರುಹುವೆನು. ಅಪಘಾತಕ್ಕೀಡಾದ ರಮಣಿಯರ ಪರಿಸ್ಥಿತಿಯನ್ನರಿಯಲು ಭೀಮರಾಯರು ಕುತೂಹಲರಾಗಿರುವರು."

"ಅವರಾರಿಗೂ ಅಪಾಯವಾಗಿಲ್ಲ. ಅವರೀ ಮನೆಯಲ್ಲಿ ಈಗಿಲ್ಲ."

"ಉಪಕಾರವಾಯಿತು. ನಾನು ಹೋಗಿಬರುತ್ತೇನೆ; ದಯವಿರಲಿ" ಎಂದು ಹೇಳಿ ಅವನು ತನ್ನೊಡೆಯನೆಡೆಗೆ ನಡೆದನು.

ಭೀಮರಾಯನ ಸದ್ವರ್ತನವನ್ನರಿತು ಭಾವೆಯರೀಗ ಹರ್ಷಿತರಾದರು. ತಾರೆಯು ಭೀಮರಾಯನಸಭ್ಯನೆಂದು ಟೀಕಿಸುತ್ತಿದ್ದುದರಿಂದ ಅವಳಿಗೀಗ ಪಶ್ಚಾತ್ತಾಪವಾಯಿತು. ಪ್ರಥಮಪರಿಚಯವಾದ ದಿನ ಅಂಗಳದಲ್ಲಿ ಗಗನದಿಂದಿಳಿದು ಬಂದ ಚಂದಿರನಂತೆ ತನ್ನ ಮನವನ್ನುಪರವಶಗೊಳಿಸಿದ ಆ ಶ್ರೇಷ್ಠನು ಈ ದಿನ ಸಂಜೆಯಲ್ಲಿ ಪುನರ್ದರ್ಶನವನ್ನೀಯುವನೆಂಬ ನಂಬಿಕೆಯಿಂದ ಅವಳ ಹೃದಯವರಳಿತು. ಅವಳ ವದನವನ್ನಲಂಕರಿಸುವ ಮನ್ನಣೆಯನ್ನು ಪಡೆಯಬೇಕೆಂದು ಹರ್ಷಲಜ್ಜೆಗಳೆರಡೂ ಏಕಕಾಲದಲ್ಲಿ ಸ್ಪರ್ಧಿಸಲಾರಂಭಿಸಿದುವು. ತಂಗಿಯ ಆರಕ್ತಮುಖದಲ್ಲಿ ಸಂಧ್ಯಾಕಾಲದ ಮುಗಿಲಿನಂತೆ ಸುಮನೋಹರ ಬದಲಾವಣೆಗಳಾದುದನ್ನು ಸರಳ

ಸ್ವಭಾವದ ಅಕ್ಕನು ಗಮನಿಸಲಿಲ್ಲ.

ಸುಮಾರು ಸಂಜೆಯ ಐದು ಗಂಟೆಯ ಸಮಯದಲ್ಲಿ ಶ್ರೀಮಂತನಾದಾ ಸಜ್ಜನಗೃಹಸ್ಥನಿಗೆ ಸ್ವಾಗತವನ್ನೀಯಲೋಸುಗ ತಾವು ಅಲಂಕರಿಸಿಕೊಂಡಿರುವುದುಚಿತವೆಂದು ತಾರೆಯು ಸೂಚಿಸಲು ಲೀಲೆಯೊಲ್ಲೆನಲಿಲ್ಲ. ತಮಗೆ ಬಹುಮಾನವಾಗಿ ಬಂದ ಹೊಸ ಉಡಿಗೆತೊಡಿಗೆಗಳನ್ನವರು ಧರಿಸಿ, ತಮ್ಮ ಪ್ರತಿಬಿಂಬಗಳನ್ನು ತಾವೇ ಗುರುತಿಸದಂತಾದರು. ತಾರೆಯೇ ಆಗಲಿ ಲೀಲೆಯೇ ಆಗಲಿ ಈ ಮೊದಲೆಂದೂ ಇಷ್ಟು ಮೋಹನಾಕಾರೆಯರಾಗಿ ತೋರಿಬರಲಿಲ್ಲ.

ತಾರೆಯು ಸಿಂಗರಿಸಿಕೊಳ್ಳುವುದರಲ್ಲಿ ತನ್ನ ನಿಪುಣತೆಯನ್ನು ಪೂರ್ಣವಾಗುಪಯೋಗಿಸಿದ್ದಳು. ಉಟ್ಟ ಬಿಳಿಯ ರೇಶಿಮೆಯ ಪತ್ತಲವು ಮುಖಚಂದ್ರನ ಚಂದ್ರಿಕೆಯಂತೊಪ್ಪಿತು. ಹಣೆಯಲ್ಲಿಟ್ಟ ಚಂದ್ರತಿಲಕದ ರಾಗವು ಅವಳ ಚಿತ್ತದನುರಾಗವನ್ನು ಸೂಚಿಸುವಂತೆ ಸೊಗಸಿತು. ಸಹಜ ಸೌಂದರ್ಯಾನ್ವಿತೆಯಾದ ತಾರೆಯು ಭೂಷಣಗಳಿಂದ ಭೂಷಿತಳಾದುದು ಚಿನ್ನದ ಕಟ್ಟಿನಲ್ಲಿ ರನ್ನವನ್ನಿಟ್ಟಂತಾಯಿತು. ಚಂದ್ರಿಕಾ ಚೂರ್ಣಕ್ಕೆ ಪ್ರೇಮಾಮೃತವನ್ನು ಬೆರಸಿ ನಿರ್ಮಿಸಿದ ಮುದ್ದು ಪ್ರತಿಮೆಯೆಂಬಂತಿವಳು ಬಹು ಮೋಹಕಳಾದಳು.

ಭೀಮರಾಯನವಿವಾಹಿತನೆಂಬುದು ನೆನಪಾಗಲು ಕದ್ದು ಮುಗುಳ್ನಗೆಯನ್ನು ಬೀರುವಳು. ಆ ಮನೋಹರ ಮಂದಸ್ಮಿತವು ಮುನಿಜನಕ್ಕೇ ವಿಸ್ಮಿತವೆನಿಸಿತು.

ಹೀಗೆ ಅಕ್ಕನು ಆತುರಳಾಗಿಯೂ ತಂಗಿಯು ಕುತೂಹಲಳಾಗಿಯೂ ಕಾಲವನ್ನು ಕಳೆಯುತ್ತಿರಲು ಯಾರೊ ಬಾಗಿ

ಲನ್ನು ಹೊರಗಡೆ ಬಡಿದರು. ಲೀಲೆಯು ಮೇಲೆದ್ದು ಭೀಮ ರಾಯನನ್ನು ಬರಮಾಡಿಕೊಂಡಳು. ಅದೇಕೋ ಈ ದಿನ ತಾರೆಯು ಮುಂದುವರಿಯಲಿಲ್ಲ; ಅವಳೆದೆಯು ಜುಮ್ಮೆಂದಿತು. ಅಂಗಾಲಿನಿಂದ ನೆತ್ತಿಯವರೆಗೂ ಅಲಂಕೃತಳಾಗಿ ನಿಧಾನವಾಗಿ ನಡೆದುಬರುವ ತಾರೆಯು, ತಾರಾಚಂದಿರರಿಂದ ಅಲಂಕರಿಸಿಕೊಂಡತಿಗಂಭೀರವಾಗಿ ಸೌಂದರ್ಯವೇ ರೂಪುಗೊಂಡಂತೆ ಮೆಲ್ಲಡಿಯಿಡುವ ಪ್ರಶಾಂತನಿಶೆಯಂತೆ ಭೀಮರಾಯನಿಗೆ ಕಂಡುಬಂದಳು. ಆನಂದದ ಮಹಾಪೂರದಲ್ಲಿ ಕಣ್ಗೆಟ್ಟು ಪುಳಕಿತಕಾಯನಾದಾ ಕೋಮಲೆಯ ಕದಪಿನಂದವನ್ನೂ ಚಂಚಲನೇತ್ರಗಳ ನಗುವನ್ನೂ ಗಮನಿಸಲು ಅವನಿಗವಳು ಮೊದಲಿಗಿಂತಲೂ ಸಹಸ್ರಪಟ್ಟು ಸುಂದರಿಯೆನಿಸಿದಳು.

ಭೀಮರಾಯನು ಬಾಗಿಲನ್ನಿಕ್ಕುವ ಭರದಲ್ಲಿ ಲೀಲೆಯರಿಯದಂತೆ ತಾರೆಯನ್ನು ಸ್ಪರ್ಶಿಸಲು ಅವಳಲ್ಲಿ ವಿದ್ಯುತ್ಪ್ರವಾಹವೊಂದು ಪ್ರವೇಶಿಸಿದಂತಾಯಿತು. ಅವನೊಮ್ಮೆ ಮೋಹಾತಿರೇಕದಿಂದ ಮೂಕ ಮುತ್ತನ್ನಿಟ್ಟುಬಿಟ್ಟನು.

ನಡುಮನೆಯಲ್ಲಿವರೆಲ್ಲರೂ ಬಂದು ಕುಳಿತ ಬಳಿಕ ಲೀಲೆಯು ಫಲಾಹಾರವನ್ನು ತೆಗೆದುಕೊಳ್ಳಬೇಕೆಂದು ವಿನಂತಿಸಲು ಭೀಮರಾಯನು ಅದರಿಂದ ತನ್ನ ಮಾತುಗಾರಿಕೆಗೆ ಕಳೆಯೇರುವುದೆಂದನು. ಕೂಡಲೇ ಅವಳು ಹೆಮ್ಮೆಯಿಂದೆದ್ದು ಒಳಹೊಕ್ಕಳು. ಈ ಸಂಧಿಯಲ್ಲಿ ನಡೆಜಾಣೆಯಾದಾ ರಮಣಿಯು ಮನೆಗೆ ದಯಮಾಡಿಸಿರುವ ಸದ್ಗೃಹಸ್ಥರೊಬ್ಬರನ್ನೇ ಬಿಟ್ಟು ಒಳಗೆ ಬರುವುದು ಯೋಗ್ಯವೆನಿಸದೆಂದು ತಾರೆಗೆ ಮೆಲ್ಲನೆ ಸೂಚಿಸಲು ಅವಳಾ ಸಲಹೆ

ಯನ್ನು ಸಂತೋಷದಿಂದೊಪ್ಪಿದಳು.

ಮರುಕ್ಷಣದಲ್ಲಿಯೇ ಭೀಮರಾಯನು ತಾರೆಯ ಸಮೀಪಕ್ಕೆ ಸರಿದು ಕುಳಿತು ಸಂಭಾಷಿಸಲಾರಂಭಿಸಿದನು.

“ತಾರಾ, ನಾನಾ ಉಡುಗರೆಗಳನ್ನು ಪ್ರತಿಫಲವಾಗಿ ಕಳಿಸಿಕೊಡಲಿಲ್ಲ. ನೀವು—ಮುಖ್ಯವಾಗಿ ನೀನು—ನನ್ನ ಜ್ಞಾಪಕದಲ್ಲಾದಾಗಲೂ ಇರುವುದನ್ನು ವ್ಯಕ್ತಪಡಿಸಲೆಂದು ಅವುಗಳನ್ನು ಕಳಿಸಿದೆನು. ನಾನು ಕೆಲವು ಸಂಗತಿಗಳನ್ನು ಸಕಾರಣವಾಗಿ ವಿವರಿಸಬೇಕಾಗಿದೆಯಲ್ಲವೇ?”

“ನಮಗಂತಹದೇನೂ ಅವಶ್ಯವಿಲ್ಲ; ಏಕೆಂದರೆ ನೀವು ಬೇಕೆಂತಲೇ ಅಸಭ್ಯರೀತಿಯಲ್ಲಂತು ನಡೆಯುವವರಲ್ಲವೆಂಬುದು ನಮಗೆ ಮನವರಿಕೆಯಾಗಿದೆ.”

“ತಾರಾ, ಪ್ರಿಯ ತಾರಾ, ನನ್ನ ವಿಷಯದಲ್ಲಿಂತಹ ಅಭಿಪ್ರಾಯವುಳ್ಳ ನಿನ್ನನ್ನೆಷ್ಟು ಮೆಚ್ಚಲಿ! ಆದರೂ ನಾಡಾವಳಿಗನುಗುಣವಾಗಿ ನನ್ನ ವಿಚಿತ್ರವರ್ತನದ ಕಾರಣವನ್ನರುಹಲಿಕ್ಕೇಬೇಕು. ಇದಕ್ಕೂ ಮುಂಚೆ—ಅಡ್ಡಮಾತನ್ನಾಡುವುದನ್ನು ಕ್ಷಮಿಸು—ತಾವಾರೆಂಬುದನ್ನಾ ಶ್ರೀಮಂತ ರಮಣಿಯರು....”

“ಹೇಳಿದರು, ಒಬ್ಬಳು ಕಮಲಾ, ಇನ್ನೊಬ್ಬಳು ಇಂದುಮತಿ. ನನಗೂ ಲೀಲೆಗೂ ಸಂಶಯವಿದೆ—ಅವರು ವೇಷಾಂತರಿಸಿ ಬಂದವರೆಂದು.”

“ಇದೇನಸಂಭವವಲ್ಲ. ಇಂದುಮತಿ ಕಮಲೆಯರು ನನ್ನ ವಿಚಾರವನ್ನೆತ್ತಲಿಲ್ಲವಷ್ಟೇ?”

“ನಿಮ್ಮ ಮಾತು ಬರಲಿಲ್ಲ. ಹಾಗಾದರೆ ನಿಮಗವರು ಅಪರಿಚಿತರಲ್ಲವಷ್ಟೇ? ಅಪರಿಚಿತರಾಗಿದ್ದರೆ ನೀವಂತು ಓಡಿ

ಹೋಗುತ್ತಿರಲಿಲ್ಲ ! "

" ಓಹೋ ! ನೀವು ನನ್ನ ಕರ್ತವ್ಯವನ್ನು ಜ್ಞಾಪಿಸಿದುದು ಒಳಿತಾಯಿತು. ನಡೆದ ಸಂಗತಿಯೇನೆಂದರೆ— ಮುರಿದ ಬಂಡಿಯಲ್ಲಿ ನನ್ನನ್ನು ತೊಂದರೆಗೀಡುಮಾಡಿದ ಕೃತಘ್ನ ಮಿತ್ರನೊರ್ವನ ಬಂಧುಗಳಿದ್ದುದನ್ನು ಕಂಡೆನು ; ನನಗಾಗ ಏನೂ ತಿಳಿಯದಷ್ಟು ದಿಗ್ಭ್ರಮೆಯಾಯಿತು. ಕೂಡಲೇ ಮುಂದಾಲೋಚನೆಗೆಡೆಗೊಡದೆ ಮನೋವಿಕಾರಕ್ಕಧೀನನಾಗಿ ನನ್ನ ಹೃದಯವನ್ನು ನೋಯಿಗೀಡುಮಾಡಿದ ಆ ಸ್ತ್ರೀಯ ರೊಡನೆ ಸಂಭಾಷಿಸುವುದನ್ನು ತಪ್ಪಿಸಿಕೊಳ್ಳುವ ಉದ್ದೇಶ ದಿಂದ ವೇಗವಾಗೆಲ್ಲಿಯೋ ಹೋಗಿಬಿಟ್ಟೆನು. "

" ನಿಮಗವರ ಪರಿಚಯವಿದ್ದ ಮೇಲೆ ಹೇಳಿರಿ: ಅವ ರುಸುರಿದ ಹೆಸರುಗಳು ಕಲ್ಪಿತವೋ ಅಥವಾ ಅಲ್ಲವೋ ? "

"ಹೆಸರನ್ನವರು ಮರೆಮಾಡಿಲ್ಲ. ನಿಮ್ಮನ್ನು—ನಿನ್ನನ್ನು ಪ್ರೀತಿಸುವ ಬದಲು ವಂಚಿಸುವ ಮನವು ಯಾರಿಗೂ ಉಂಟಾಗದು " ಎಂದು ಹೇಳಿ ಅವಳ ಕಮಲಕೋಮಲ ವಾದ ಕರಗಳನ್ನದುಮಿ ಪಿಸುನುಡಿಯಲ್ಲಿ " ಈ ಸ್ಪರ್ಶಸುಖದ ಮಾಧುರ್ಯವೆಂತಹುದು ! ಸ್ವರ್ಗಸುಖಕ್ಕಿಮ್ಮಡಿಯಾದ ಸುಖವು ನಿನ್ನಲ್ಲಿ ಮನೆಮಾಡಿದೆ. ಪ್ರಿಯೆ, ತಾರಾ, ಪ್ರಥಮ ದರ್ಶನ ಕಾಲದಲ್ಲಿಯೇ ನಾನು ನಿನ್ನ ವಶನಾದೆನು. ಆ ಕಾಲದಿಂದೀ ಕಾಲದವರೆಗೆ ನಿನ್ನ ಗಾತ್ರವೇ ನನ್ನ ನೇತ್ರದೆದು ರಿಗಿದೆ. ನಿನ್ನ ಪ್ರತಿಮೆಯನ್ನು ನನ್ನ ಹೃದಯಸಿಂಹಾಸನದ ಮೇಲೇರಿಸಿ ಪರವಶನಾಗಿದ್ದೇನೆ. ಪ್ರಸನ್ನಳಾಗು " ಎಂದ ವಳನ್ನು ಬರಸೆಳೆದನು. " ಬೇಡ, ಸೆರಗೊಡ್ಡಿ ಬೇಡುವೆನು. ಇದು ಸಮಯ—" ಎಂದವಳೆನ್ನುವುದರೊಳಗಾಗಿ ಕಾಮಾಂಧ

ನಾದಾ ಸುಂದರನು "ಅದಾಗದು, ದಿವ್ಯಮೋಹಿನಿ, ನನ್ನೀ ಅಲ್ಪಾನಂದವನ್ನು ನಂದಿಸಬೇಡ. ನಿನ್ನಲ್ಲಿ ಅತಿ ಅನುರಕ್ತನಾಗಿದ್ದೇನೆ. ನನಾಗನು ಸುಖದಲ್ಲಿಬ್ಬರೂ ಮೈಮರೆಯೋಣ" ಎಂದವಳನ್ನು ಬಿಗಿಯಾಗಾಲಿಂಗಿಸಿ ಅವಳ ಮುಖದಮೇಲೆ ಚುಂಬನದ ಜಲ್ಮಳೆಯನ್ನು ಸುರಿಸಿ ಬಿಟ್ಟನು.

ತಾರೆಯು ಹೇಗೋ ಮೆಲ್ಲನೆ ಜಾರಿ ದೂರ ಸರಿದು ನಿಲ್ಲಲು, ಅವನು "ಮನೋಹರೆ, ನಾನು ನಿನ್ನನ್ನತಿಮೋಹಿ ಸಿರುವೆನೆಂದವಳಿಗರುಹಿಬಿಡುವೆನು. ಏಕೆ ಹೆದರುವೆಯೋ?" ಎನ್ನಲು, ಅವಳು "ಬೇಡ, ಬೇಡ, ಈಗ ಬೇಡ. ಭೀಮ ರಾಯರೇ ವಿಚಾರಮಾಡಿರಿ" ಎಂದೆನ್ನುವುದರೊಳಗಾಗಿ ಅವಳ ಗಲ್ಲವನ್ನಲ್ಲಾಡಿಸಿ "ಪ್ರಿಯೆ, ರಘುರಾಯನೆಂಬ ಹೆಸರಿನಿಂದಲೇ ನನ್ನನ್ನು ಕರೆ. ಭೀಮರಾಯನೆಂಬುದು ಛದ್ಮನಾಮ" ಎಂದನು.

"ರಘುರಾಯರೇ, ಇಲ್ಲಿ ನೋಡಿರಿ. ನಮಗೆ ಪರಿಚಯ ವಾದುದು ಇತ್ತೀಚೆಗೆ; ನಮ್ಮ ತಂದೆಯೀಗ ಊರಿನಲ್ಲಿಲ್ಲ—"

"ಹಾಗಾದರೆ ಅಪ್ಸರೆಯೇ, ಈಗಲೇ ಪ್ರೇಮವನ್ನು ಪ್ರಕಟಪಡಿಸುವುದು ಬೇಡ. ಆದರೆ ನೀನೂ ಪ್ರೀತಿಸು ವೆಯೋ-ಪ್ರೀತಿಸಬಲ್ಲೆಯೋ ? ಓ, ನನ್ನ ಸ್ವರ್ಗ ಅಥವಾ ನರಕವು ನಿನ್ನುತ್ತರವನ್ನೇ ಅವಲಂಬಿಸಿವೆ."

"ನನ್ನುತ್ತರವು ನಿಷೇಧಾರ್ಥಕವಲ್ಲದಿದ್ದರೆ ನಿಮ್ಮ ಭಾವ ನೆಯು— "

"ನೀನು ಸುಂದರಳಾಗಿರುವಷ್ಟೇ ಕರುಣೆಯೂ ಕೋಮ ಲೆಯೂ ಆಗಿರುವೆಯೆಂದು ಭಾವಿಸುವೆನು."

" ರಘುರಾಯರೇ, ಇಂತಹ ವಾಕ್ಚತುರರನ್ನು ಪ್ರೀತಿಸ ದಿರುವವರಾರು ? ಇದಕ್ಕೂ ಹೆಚ್ಚು ಹೇಗೆ ಹೇಳಲಿ? "

" ಸುಂದರೀ ನೀನಿನ್ನು ನನ್ನವಳು. ಹಾಗಾದರೆ ಕೃಪೆ ಯಿಟ್ಟು ಕೇಳು; ಹಾಗೂ ಅದರಂತೆ ನಡೆ. ನಾಳಿನ ಸಂಜೆ ಯಲ್ಲಿ ನಾವಿಬ್ಬರೂ ಸಂದರ್ಶಿಸೋಣ. ಸ್ಥಳವು ಹನುಮನ ಗಲ್ಲಿಯಲ್ಲಿರುವ ಪಾರ್ವತಿಯ ಮಹಲು. ಮಾನವ ಜಾತಿ ಯಲ್ಲತಿಸುಂದರವಾದ ಸ್ತ್ರೀಜಾತಿಗೆ ಅಲಂಕಾರಪ್ರಾಯಳಾದ ನಿನ್ನನ್ನೆದುರುನೋಡುತ್ತಾ ನಾನಲ್ಲಿ ಆರು ಗಂಟೆಗೇ ಬಂದು ಕುಳಿತಿರುವೆನು. ತಾರಾ, ನನಗೆ ಆಶಾಭಂಗವನ್ನುಂಟು ಮಾಡುವುದಿಲ್ಲವೆಂದು ವಚನಕೊಡು. "

ತಾರೆಯು ವಚನವಿತ್ತಳು. ಭೀಮರಾಯನು ಕೃತಾರ್ಥ ನಾದನು.

ತನ್ನ ತಂಗಿಯ ಮನೋರಾಜ್ಯವನ್ನು ಜಯಿಸಿ ಅದಕ್ಕೆ ಭೀಮರಾಯನು ದೊರೆಯಾದುದು ಲೀಲೆಗೆ ತಿಳಿಯಲಿಲ್ಲ. ಆದರೂ ಅವನ ಸಂಭಾಷಣೆಯು ಹೆಚ್ಚು ಸ್ವಾರಸ್ಯಮಯವೂ ಆವೇಶಯುಕ್ತವೂ ಆಗಿತ್ತೆಂದೂ ತಾರೆಯ ಮಾತಿನಲ್ಲಿ ನಡುಕವೂ ನಾಚಿಕೆಯೂ ನೋಟದಲ್ಲಿ ಕಳ್ಳತನವೂ ಹೇಗೋ ಸೇರಿಕೊಂಡಿರುವುವೆಂದೂ ಫಲಾಹಾರದ ವೇಳೆಯಲ್ಲಿ ಸ್ವಲ್ಪ ಮಟ್ಟಿಗೆ ಅವಳರಿತಳು. ಆದರೂ ಮಾರಮಹಿಮೆಯ ನ್ನಿನ್ನೂ ಅರಿಯದ ಮುಗ್ಧಲೀಲೆಗೆ ಅದರ ಗೂಢವು ಹೊಳೆ ಯಲಿಲ್ಲ.

---

# ಹುಲಿಯ ಗವಿಯಲ್ಲಿ

ನರರಕ್ಕಸಿಯನ್ನು ವೀರಪ್ಪನನುಸರಿಸಿದನು. ಆ ನೇವನೆಯಿಂದವರು ಗುಪ್ತದ್ವಾರವೊಂದರ ಮೂಲಕವಾಗಿ ಕೇಕಾಲ ಕ್ರಮಿಸಬೇಕಾಗಿತ್ತು. ರಾತ್ರಿಯಾದುದರಿ ದ ಕತ್ತಲೆಯ ಭೀಕರತೆಯು ಅಲ್ಲಿ ಹೆಚ್ಚಿರುವುದೆಂದು ವೀರಪ್ಪನು ಬಗೆದನು. ಆದರೆ ನಿಜಸ್ಥಿತಿಯಂತಿರಲಿಲ್ಲ. ಅದು ಕ್ರೂರ ರಾತ್ರಿಯ ನಿತ್ಯನಿವಾಸಸ್ಥಾನವಾದುದರಿಂದ ಕತ್ತಲೆಯ ಪ್ರಾಬಲ್ಯವು ಹಗಲುರಾತ್ರಿಗಳೆರಡರಲ್ಲಿಯೂ ಏಕಪ್ರಕಾರವಾಗಿತ್ತು. ನಿಶಾದೇವಿಯು ವಸ್ತುಗಳ ಆಕಾರ, ಬಣ್ಣ ಮೊದಲಾದ ಭಿನ್ನಭಾವಗಳನ್ನಳಿಸಿಬಿಟ್ಟಿದ್ದಳು. ಅಲ್ಲಿ ವ್ಯಾಪಿಸಿದ ದುರ್ಗಂಧವು ಅಲ್ಲಿಯ ಅಸಹ್ಯತೆಗೆ ಕಳಸವನ್ನಿಟ್ಟಂತಿತ್ತು. ರಾತ್ರಿಯನ್ನೇ ಪ್ರೀತಿಸುವ ಪ್ರಾಣಿಗಳೂ ಸಹ ಇಂತಹ ರಾತ್ರಿಯನ್ನೆಂದೂ ಪ್ರೀತಿಸವೆಂದು ವೀರಪ್ಪನು ಬೆದರಿದನು.

ಮುಂದವರು ಮೆಟ್ಟಿಲುಗಳನ್ನೇರಿ ಮೇಲೆ ಬಂದರು. ಅಲ್ಲೊಂದು ಕೋಟೆಯಂತಹ ಹಳೆಯ ತರದ ಮನೆಯೊಂದಿತ್ತು. ನರರಕ್ಕಸಿಯು ಅದೊಂದು ಬಗೆಯ ಕೇಕನ್ನು ಹಾಕಲು ದೊಡ್ಡ ಕಬ್ಬಿಣದ ಬಾಗಿಲು ತೆರೆಯಿತು. ವೀರಪ್ಪನು ಸೂತ್ರದ ಗೊಂಬೆಯಂತೆ ಯಾಂತ್ರಿಕ ರೀತಿಯಲ್ಲಿ ಅವಳನ್ನೇ ಹಿಂಬಾಲಿಸಿದನು.

ಮನೆಯ ಒಳಅಂಗಳದಲ್ಲಿ ಧಷ್ಟಪುಷ್ಟನೊಬ್ಬನು ನಿಂತಿದ್ದನು. ಅವನ ಮೈಮೇಲೆ ಅಂಗಿಯಿರಲಿಲ್ಲ. ತಲೆಯ ಮೇಲೆ ಗಮುಟು ಟೊಪ್ಪಿಗೆಯಿತ್ತು. ಉಬ್ಬಿದ ಕೆಂಪು ಹಲ್ಲು

ಗಳಿಂದಲೂ ಕಲ್ಲಿದ್ದಲಿಯಂತಹ ಸುವರ್ಣದಿಂದಲೂ ಅವನು ಬಹುಮನೋಹರನಾಗಿದ್ದನು. ಕ್ಷೌರವನ್ನು ಮಾಡಿಸಿ ಕೊಳ್ಳುವುದು ಅವರ ಕುಲಸಂಪ್ರದಾಯದಲ್ಲಿದ್ದಂತೆ ಕಂಡು ಬರಲಿಲ್ಲ.

ಅವನೇ ಆ ಮನೆಯ ಮಾಲಿಕನು. ಅನಂತನೆಂದವನ ಹೆಸರಾದರೂ, ಮಾನವರ ತಲೆಬುರುಡೆಗಳನ್ನೇ ಆಭರಣ ವಾಗಿರಿಸಿಕೊಂಡು ಕುಡಿಯುವ ಮತ್ತು ತಿನ್ನುಣ್ಣುವ ಕಾರ್ಯ ಗಳೆಲ್ಲವನ್ನೇ ಉಪಯೋಗಿಸುವ ಬಹುಭಯಂಕರಾಕಾರವುಳ್ಳ ಕಾಪಾಲಿಕರ ನೆನಪನ್ನುಂಟುಮಾಡಿಕೊಡುವ ಸ್ವರೂಪ ವುಳ್ಳವನಾದ ಅವನನ್ನೆಲ್ಲರೂ ಕಾಪಾಲಿಕನೆಂದೇ ಕರೆಯುತ್ತಿ ದ್ದರು. ಅದರಿಂದವನಿಗಾನಂದವೆನಿಸುತ್ತಿತ್ತು.

ಅವನ ಕಾರ್ಯಗಳಲ್ಲವನ ಮಗಳು ಸಹಾಯಕಳಾಗಿದ್ದಳು, ಅವಳಿಗೆ ೧೮-೧೯ ವರ್ಷಗಳು. ಇಲಿ, ಹುಲಿ, ನರಿ, ತೋಳ, ಹಾವುಗಳ ಎದ್ದುಕಾಣುವ ಗುಣಗಳೆಲ್ಲವೂ ಇವಳನ್ನಾಶ್ರಯಿ ಸಿದ್ದುವು. ಅಸ್ತವ್ಯಸ್ತವಾದ ತಾಮ್ರಕೇಶರಾಶಿಯು ಬಹು ಹಾರಾಡುತ್ತಿರಲು ಪಲ್ಲವಿತ ಪ್ರೋದೆಯಿಂದ ಪರಿಮಬರುವ ಪ್ರಾಣಿಯಂತವಳಿಸವಳು. ಕಾಳಿಯೆಂಬುದು ಅವಳ ಅಂಕಿತ ಮತ್ತು ಅನ್ವರ್ಥಕ ನಾಮವು.

ಅಲ್ಲಿಯ ಗಂಡಸರ ಮುಖದಲ್ಲಿ ಕ್ರೌರ್ಯ, ಸ್ವಾರ್ಥ, ಮೋಸವೇ ಮೊದಲಾದ ದುರ್ಗುಣಗಳೂ, ಹೆಂಗಸರ ಮೋರೆ ಯಲ್ಲಿ ನಾಚಿಕೆಗೆಟ್ಟತನವೂ ಚಾಪಲ್ಯವೂ ಎದ್ದುಕಾಣುತ್ತಿ ದ್ದುವು. ಪುರುಷರಿಂದ ದ್ರವ್ಯವನ್ನೆಳೆದುಕೊಳ್ಳಲು ಯುವತಿ ಯರು ಕಾಮಭಾವವನ್ನು ಸೂಚಿಸುತ್ತಿದ್ದರು. ಇನ್ನು ಕೆಲವರು ಆಣೆಗಳನ್ನಿಟ್ಟುಕೊಳ್ಳುತ್ತಲೂ ಬೈಗಳ ಸುರಿಮಳೆಯನ್ನು

ಸ್ಫುರಿಸುತ್ತಲೂ ಗಂಡಸರಿಗಿಂತಧಿಕರೆನಿಸಿದರು. ಹಲವೆಡೆಗಳಲ್ಲಿ ಸ್ತ್ರೀ ಪುರುಷ ಜಾತಿಭೇದವಿಲ್ಲದಂತೆ ಅನೇಕರು ಭಂಗಿ, ಸೆರೆ, ಅಫು ಮೊದಲಾದುವುಗಳ ಸೇವನೆಯಿಂದ ಮತ್ತರಾಗಿ ಬಿದಿದ್ದರು. ಅಂತೂ ಒಟ್ಟಿನಲ್ಲಿ ನಾಶಕ ವಿಷಯಂಬ ಹಟತ್ತ್ವವೇ ಅಲ್ಲಿ ಮನೆಮಾಡಿತ್ತು.

ಕಾಪಾಲಿಕನು ಇವರಿಬ್ಬರನ್ನೊಳಗೆ ಬರಮಾಡಿ ಬಾಗಿಲನ್ನಿಕ್ಕಿ ಅವರನ್ನೊಂದು ಚಿಕ್ಕ ಕೋಣೆಗೆ ಕರೆದೊಯ್ದನು. ಅಲ್ಲಿಲ್ಲಿಯೂ ಜೇಡನ ಬಲೆಯು ಹಬ್ಬಿತ್ತು; ಜಾವಲಿ, ಗುಂಗಾಡಿ, ಸೊಳ್ಳೆ ಮೊದಲಾದುವುಗಳು ವಿಪರೀತವಾಗಿದ್ದುವು. ಮೂಲೆಯಲ್ಲೊಂದು ಮೇಣಬತ್ತಿಯು ಮಿಣುಗುಟ್ಟುತ್ತಿತ್ತು.

ಇನ್ನು ಮಾತಿಗೆ ಮೊದಲಾಯಿತು:

"ಏನಪ್ಪಾ, ಈ ದಿನದ ವರ್ತಮಾನವೇನು? ನಿನ್ನೊಡನೆ ಬಂದ ಈ ಪ್ರಾಣಿ ಯಾವುದು?"

"ಆ ಕಾಗದಪತ್ರ ಮತ್ತು ಹುಂಡಿಗಳ ವಿಚಾರವಿನ್ನೂ ಮುಗಿದಿಲ್ಲ."

"ಏಕೆ, ಇನ್ನೂ ಮುಗಿದಿಲ್ಲವೋ?"

"ಇದಕ್ಕುತ್ತರವು—ಮುಗಿದಿಲ್ಲ; ಮುಗಿದಿದೆ. ರಾಯರನ್ನಿವನು ನೋಡಬೇಕಂತೆ. ಸ್ಪಷ್ಟವಾಗಿ ಹೇಳಬೇಕೆಂದರೆ ಇವರಲ್ಲೇನೋ ಮೋಸವಿರುವಂತಿದೆ; ಆದುದರಿಂದ ನಾವೇ ಇವನನ್ನು ಮೊದಲು ಮಾತನಾಡಿಸುವುದೊಳ್ಳೆಯದು."

"ಓಹೋ, ನನಗೂ ಸ್ವಲ್ಪ ಏನೋ ಹೊಳೆದಂತಾಯಿತು!" ಎನ್ನುತ್ತಾ ಅವನಾ ದೀಪವನ್ನೆತ್ತಿ ವೀರಪ್ಪನ ಮೋರೆಯ ಮುಂದದನ್ನು ಹಿಡಿದು, "ಅವನೀಗ

ದುರಾಲೋಚನೆಯಿಂದಿಲ್ಲಿಗೆ ಬಂದಿದ್ದರೆ ಅವನ ಮುಖದಲ್ಲಿ ದನ್ನು ಕಂಡುಕೊಳ್ಳುವೆನು. ನಂತರ ಅವನನ್ನಿಲ್ಲದಂತೆ ಮಾಡುವುದು ನಮಗೊಂದು ನಿಮಿಷದ ಕೆಲಸ" ಎಂದನು.

ವೀರಪ್ಪನ ರಕ್ತದಲ್ಲಿ ಶೈತ್ಯಪ್ರವಾಹವೊಂದು ಹರಿದಂತಾಗಲು ತಲೆಯು ಗಿರ್ರೆಂದಿತು. ಆದರೂ ದೇವರ ಮೇಲೆ ಭಾರವನ್ನಿಟ್ಟು ಹೇಗೋ ತಡೆಹಿಡಿಸಿಕೊಂಡು ಎದೆಗುಂದದಂತಿದ್ದನು. ಕಾಪಾಲಿಕನು ತನ್ನ ಪರೀಕ್ಷಾನಂತರ "ಇದರಲ್ಲಿನ್ನೇನೂ ಇಲ್ಲ; ಅಥವಾ ಮದ್ಯೆಗವವಿಲಾಸದಿಂದ ನಾನೇ ಮೋಸಹೋಗಿರಬೇಕು" ಎಂದುಸುರಿ ದೀಪವನ್ನತ್ತ ಇಟ್ಟುಬಿಟ್ಟನು.

ವೀರಪ್ಪನು ಅವರಲ್ಲಿ ನಂಬಿಕೆಯನ್ನು ಹುಟ್ಟಿಸಲು ಧೈರ್ಯವಾಗಿ ಮಾತನಾಡಲುಪಕ್ರಮಿಸಿದನು—

"ಇನ್ನು ಬಂದ ಕಾರ್ಯವನ್ನು ಹೇಳುವೆನು. ನೀವಾಗಲಿ ನಿಮ್ಮಿತರ ಸಹಾಯಕರಾಗಲಿ ನನ್ನ ಕಾರ್ಯದಲ್ಲಿ ಸಹಕರಿಸಲೊಪ್ಪದಿದ್ದರೆ ಎಲ್ಲವನ್ನೂ ಗುಪ್ತವಾಗಿಡಲಿಕ್ಕೇಬೇಕು; ಮತ್ತು ನಾನು ಹೇಳಿದುದು ತಪ್ಪೆಂದು ನನ್ನ ತಲೆಗೇ ಕಟ್ಟಲಿಕ್ಕಾಗದು. ಇದನ್ನು ನೀವು ಒಪ್ಪುವಿರಷ್ಟೇ ? "

"ಏನು, ಇಂತಹ ಕರಾರುಗಳನ್ನು ಮಾಡಲಿಕ್ಕೆ 'ಇದು ನಿಮ್ಮ ವ್ಯವಹಾರ ಸ್ಥಳವಲ್ಲ. ವಿಶ್ವಾಸಘಾತಕರೆದೆಗೆ ತಣ್ಣಗಿನ ಬರ್ಚಿಯನ್ನು ಚುಚ್ಚಿಬಿಡುವುದೇ ನಮ್ಮ ಅತಿಥಿ ಸತ್ಕಾರ. ಇದನ್ನು ತಿಳಿದುಕೊಂಡೇ ಹೇಳತಕ್ಕುದನ್ನು ಹೇಳಿಬಿಡಿರಿ."

"ಒಳ್ಳೆಯದು, ನಾನೊಬ್ಬ ವ್ಯವಹಾರಸ್ಥರ ಪ್ರಯಾಣಿಕ—"

"ದುರಗೀಓಣಿಯಲ್ಲಿಯ ಶೇಷಯ್ಯಶೆಟ್ಟಿ ಮತ್ತು ಸುಬ್ರಾಯಶೆಟ್ಟರಲ್ಲಿ ನೀವಿರುವಿರಿ. ನಿಮ್ಮ ಹೆಸರು ವೀರಪ್ಪ. ಇನ್ನು ಮುಖ್ಯ ವಿಷಯವನ್ನುಸುರಿರಿ."

"ಎಂತಹ ವಿಚಿತ್ರ! ಇಲ್ಲಿ ನೋಡಿ, ಆ ದಿನ ಸುಲಿಗೆ ಯಾದುದು ಸರಿಯಷ್ಟೇ. ನಮ್ಮ ಯಜಮಾನನು ನನ್ನಲ್ಲಿ ಬಹು ಸಂಶಯಪಟ್ಟು ನನ್ನ ಲೆಕ್ಕವನ್ನೆಲ್ಲಾ ಪರೀಕ್ಷಿಸ ಬೇಕೆನ್ನುತ್ತಾನೆ. ನಾನದನ್ನೀಗ ಒಪ್ಪುವ ಸ್ಥಿತಿಯಲ್ಲಿಲ್ಲ. ಇನ್ನೆರಡು ಸಾವಿರ ರೂಪಾಯಿಗಳು ದೊರೆತರೆ ನಾನು ಪಾರಾ ಗುವೆನು. ಇಲ್ಲದಿದ್ದರೆ ನಾನು ಸಾಡಿದ್ದು ಸೆರೆಯಾಳಾಗಿರ ಬೇಕಾಗುವುದು. ವಿಶ್ವಾಸಘಾತಕನಾಗಿ ಬಂದಿಯಾಗುವ ಬದಲು ದರೋಡೆಯವನಾಗಿ ಕೈವಶನಾಗುವುದು ನನ್ನ ಮನಸ್ಸಿಗೆ ಬರುತ್ತದೆ. ದರೋಡೆಯವನು ತಲೆತಪ್ಪಿಸಿ ಕೊಳ್ಳಬಹುದೆಂಬ ನಂಬಿಕೆಯಿದೆ—"

"ಭಲೆ, ಗಂಡಸಿನಂತೆ ನುಡಿಯುತ್ತಿರುವೆ! ಅವರ ದ್ರವ್ಯವನ್ನಪಹರಿಸಿ ಅವರಿಗೇ ಕೊಡಬೇಕೆನ್ನುವೆಯಲ್ಲವೇ? ನಿನಗಂತೂ ಅಲ್ಲಿ ಎಲ್ಲ ಭಾಗಗಳೂ ಪರಿಚಿತವಾದುವು. ಅಹುದೆನ್ನುವಿಯೋ? ಸಂತೋಷ."

"ಅವರಲ್ಲಿ ಎಂಟು ಹತ್ತು ಲಕ್ಷಕ್ಕೆ ಕಡಿಮೆಯಿರುವುದಿಲ್ಲ. ಪ್ರತಾಪರುದ್ರನು ನನಗೆ ಸಹಾಯಕನಾದರೆ ಜಯವು ಸಿಕ್ಕ ಹಾಗೇ ಅಲ್ಲವೇ?"

ಕಾಪಾಲಿಕನಿಷ್ಟದಂತೆ ನರರಕ್ಕಸಿಯು ವೀರಪ್ಪನನ್ನು ಪ್ರತಾಪರುದ್ರನ ಸಂದರ್ಶನಕ್ಕೆಂದು ಮೇಣಬತ್ತಿಯ ಬೆಳಕಿ ನಲ್ಲಿ ಮೆಲ್ಲನೆ ಕರೆದೊಯ್ದಳು. ಕಾಪಾಲಿಕನು ಪುನಃ ಹೊರಬಾಗಿಲ ಬಳಿಗೆ ಹೋಗಿ ನಿಂತನು.

ಅವರತಿ ಇಕ್ಕಟ್ಟಾದ ತಿಟ್ಟದ ಮೆಟ್ಟಿಲುಗಳನ್ನೇರಲಾರಂಭಿಸಿದರು. ಕಾಪಾಲಿಕನಂತಹ ಟೊಣಪನೆಂತು ಅದನ್ನೇರಬಲ್ಲನೆಂದು ವೀರಪ್ಪನು ಆಶ್ಚರ್ಯಪಟ್ಟನು. ಮುಂದವರು ಮೊದಲುಪ್ಪರಿಗೆಗೆ ಬಂದರು. ಅದಕ್ಕೆರಡು ಬಾಗಿಲುಗಳಿದ್ದುವು. ಅವುಗಳಲ್ಲೊಂದರ ಮುಖಾಂತರವಾಗಿ ಬೇರೊಂದು ಮೆಟ್ಟಿಲುಗಳನ್ನೇರಿ ಎರಡನೆಯ ಅಂತಸ್ತನ್ನು ಸೇರಿದರು. ಅಲ್ಲೆಲ್ಲಿಯೂ ಬಾಗಿಲುಗಳಿರಲಿಲ್ಲವಾದುದರಿಂದ ಪ್ರತಾಪರುದ್ರನಿಲ್ಲಿಯೇ ಇರುವನೆಂದು ವೀರಪ್ಪನು ಚಕಿತನೇತ್ರನಾಗಿ ಸುತ್ತಲೂ ನೋಡಲಾರಂಭಿಸಿದನು.

ವೀರಪ್ಪನ ತರ್ಕವು ತಪ್ಪಾಗಿತ್ತು!

ನರರಕ್ಕಸಿಯು ದೀಪವನ್ನಿವನ ಕೈಯಲ್ಲಿತ್ತು ಒಂದು ಮೂಲೆಯಲ್ಲಿ ರಾಶಿಯಾಗಿ ಬಿದ್ದಿದ್ದ ಹುಲ್ಲನ್ನು ಲಗುಬಗೆಯಿಂದ ತೆಗೆದೊಗೆದು ಅಲ್ಲಿದ್ದ ನೆಲಬಾಗಿಲನ್ನು ತೆರೆದು ಮುಂದಡಿಯಿಟ್ಟಳು. ವೀರಪ್ಪನು ಮರುಮಾತಿಲ್ಲದೆ ಅವಳನ್ನು ಹಿಂಬಾಲಿಸಿದನು. ತನ್ನ ವಿಶ್ವಾಸಘಾತಕತನವನ್ನು ಅವಳು ಅನುಮಾನಿಸಿದ್ದುದರಿಂದ ತನಗೇನಾದರೂ ಕೆಡುಕುಂಟಾದರೆ ಆ ಸಿಪಾಯಿಗಳ ಸಹಾಯವನ್ನು ಪಡೆಯುವುದೆಂತು? ಬಹು ಎಚ್ಚರದಿಂದ ಬಂದ ತನಗೆ ಕಂಗೆಡಿಸಿರುವ ಈ ಸ್ಥಳವು ಅವರಿಗೆ ತಿಳಿಯುವುದೆಂತು?—ಎಂಬ ವಿಚಾರಗಳು ಅವನ ಮನಸ್ಸನ್ನು ಮುಸುಕಿದುವು. ಆದರೂ ಅವನು ಆಗಿನ ಪರಿಸ್ಥಿತಿಯ ಅರಿವನ್ನು ತಂದುಕೊಂಡು ಧೈರ್ಯವುಳ್ಳವನಾದನು.

ಬಹು ದೊಡ್ಡ ಏಣಿಯಿಂದವರು ಕೆಳಗಿಳಿದೊಡನೆಯೇ ನರರಕ್ಕಸಿಯು ಪ್ರತಿಧ್ವನಿಯಾಗುವಂತೆ ಬಾಗಿಲೊಂದ

ನ್ನೊದ್ದು ತೆರೆದಳು. ಕೆಲ ನಿಮಿಷಗಳಲ್ಲಿಯೇ ವೀರಪ್ಪನು ಪ್ರತಾಪರುದ್ರನ ಮುಂದೆ ಹೋಗಿ ನಿಂತನು.

ಪ್ರತಾಪರುದ್ರನಿಗೆ ಸುಮಾರು ೪೦ ವರ್ಷ ವಯಸ್ಸು. ಬಹು ಎತ್ತರನೂ ಬಲಶಾಲಿಯೂ ಆದವನು ಚಿಕ್ಕದಾದರೂ ಚೆಂದವಾದ ಕೋಣೆಯಲ್ಲಿ ದಿಂಬನ್ನೊರಗಿಕೊಂಡು ಕುಳಿತಿದ್ದನು. ಜೀವದಾಶೆಯನ್ನು ಪೂರ್ಣವಾಗುಳಿದ ಅತಿ ತಾಮಸನ ಪೈಶಾಚಿಕ ದುಷ್ಟಕಳೆಯು ಅವನ ಮೋರೆಯಲ್ಲುಕ್ಕುತ್ತಿತ್ತು. ಗಲ್ಲೀಮೀಸೆಯೂ ತಲೆಯ ಕೂದಲೂ ಬಹು ಒರಟಾಗಿಯೂ ಕಪ್ಪಾಗಿಯೂ ಜಡೆಗಟ್ಟಿಯೂ ಇದ್ದುವು. ಅವನು ಬಟ್ಟೆಯನ್ನು ಧರಿಸುವುದರಲ್ಲೆಷ್ಟೂ ಲಕ್ಷ್ಯವಿಟ್ಟಿರಲಿಲ್ಲವೆಂದು ಥಟ್ಟನೆ ಹೊಳೆಯುತ್ತಿತ್ತು.

ವೀರಪ್ಪನೊಳಗೆ ಬಂದೊಡನೆಯೇ ಅವನು ಎದ್ದು ಕುಳಿತು "ಓಹೋ, ನೀವು ನನಗಪರಿಚಿತರಲ್ಲ. ನಿಮ್ಮ ಮುಖವನ್ನಾದಿನ ಸ್ವಲ್ಪಮಟ್ಟಿಗೆ ನೋಡಿದ್ದೆ. ನಿಮ್ಮ ಕಾಗದ ಪತ್ರಗಳು ಸರಿಯಾಗಿರುವವಷ್ಟೇ" ಎಂದು ನುಡಿದನು.

"ಅವು ಸರಿಯಾಗಿವೆ. ಇಗೋ ಹಣವಿಲ್ಲದೆ" ಎಂದವಳು ಹಣವನ್ನು ಸುರುವಿ "ಇವನಾವುದೋ ಕಾರ್ಯಕ್ಕಾಗಿಲ್ಲಿಗೆ ಬಂದಿದ್ದಾನೆ. ನಾನೂ ಕಾಪಾಲಿಕನೂ ಇವನನ್ನಿಲ್ಲಿಗೆ ಕರೆತರಬಹುದೆಂದು ನಿಶ್ಚಯಿಸಿದ್ದೇವೆ. ಇವನು ತನ್ನ ಕಾರ್ಯವನ್ನವನಿಗರುಹಿರುವನು" ಎಂದಳು.

ಪ್ರತಾಪರುದ್ರನಾವ ಕಾರ್ಯವೆನ್ನಲು ವೀರಪ್ಪನೆಲ್ಲವನ್ನೂ ಸ್ವಾರಸ್ಯಮಯವಾಗಿರುವಂತೆ ವಿವರಿಸಿದನು.

ಈ ವಿಷಯದಲ್ಲಿ ನರಸಕ್ಕಸಿಯ ಅಭಿಪ್ರಾಯವನ್ನವನು ಕೇಳಲು ಅವಳಿದೆಲ್ಲವೂ ಸರಳವ್ಯವಹಾರವೆಂದು ತನ್ನ ಅಭಿ

ಪ್ರಾಯವಾದರೂ ತಾವಿಬ್ಬರೂ ಆ ಮನೆಗೆ ಬರುವ ಮೊದಲು ಕೆಲವು ಸಂಶಯಾಸ್ಪದವಾದ ಸಂಗತಿಗಳಿದ್ದುವೆಂದೂ, ತಮ್ಮ ಪದ್ಧತಿಯಂತಪರಿಚಿತರನ್ನು ಕರೆತರುವಾಗ ದಾರಿಯಲ್ಲೊಂದೆ ಡೆಯಲ್ಲಿ ನಿಲ್ಲಲು ಒಬ್ಬೊಬ್ಬರಾಗಿ ಯಾರೋ ಹಾದುಹೋದ ರೆಂದೂ, ಕತ್ತಲಾದುದರಿಂದ ಸತ್ಯತೆಯು ಮರೆಯಾಯಿ ತೆಂದೂ, ಅವರೆಲ್ಲರೂ ಈ ಮಾರ್ಗದ ಕಡೆಗೆ ತಿರುಗಿದುದ ರಿಂದ ಸಂಶಯವಿಮ್ಮಡಿಸಿತೆಂದೂ, ಆದರೂ ವೀರಪ್ಪನ ವರ್ತನದಿಂದ ಅವುಗಳು ವ್ಯರ್ಥವಾದ ಹೆದರಿಕೆಗಳೆಂದೀಗ ತನ್ನ ಭಾವನೆಯೆಂದೂ ಹೇಳಿದಳು.

ಈ ಅವಧಿಯಲ್ಲಿ ಪ್ರತಾಪರುದ್ರನು—ಶಂಕಿತನಾಗಲ್ಲ ದಿದ್ದರೂ—ನಟ್ಟ ದಿಟ್ಟಿಯಿಂದಿವನನ್ನೇ ನೋಡುತ್ತಿದ್ದನು. ಕೊನೆಗಿವನಲ್ಲಾವ ಬದಲಾವಣೆಯೂ ಕಾಣದಿರಲು ಅವನು ಸಂತುಷ್ಟನಾದನು.

ಅಲ್ಲಿ ರಾತ್ರಿಯಲ್ಲೆಷ್ಟು ಜನಗಳಿರುವರೆಂದೂ, ಕಾವಲು ಗಾರರಲ್ಲೆಂತಹ ಆಯುಧಗಳಿರುವವೆಂದೂ, ಪ್ರತಾಪ ರುದ್ರನು ವಿವರವಾಗಿ ವಿಚಾರಿಸುತ್ತಿರಲು ವೀರಪ್ಪನು ಬಹು ಕುಶಲತೆಯಿಂದ ಸ್ವಾರಸ್ಯಮಯವಾಗಿ ಉತ್ತರವಿತ್ತನು. ಈ ಕಾರ್ಯವು ಬಹು ಬಯಂಕರವಾದುದರಿಂದ ಬಹು ಜಾಗ್ರತೆ ಯಿಂದಿರಬೇಕೆಂದು ವೀರಪ್ಪನು ಸೂಚಿಸಲು ಅದು ವೀರಪ್ಪ ನಂಥವರಿಗೆ ಹುಲಿಯಾದರೂ ತಮ್ಮಂಥವರಿಗೆ ಇಲಿಗಿಂತಲೂ ಕಡೆಯೆಂದು ನರರಕ್ಕಸಿಯೆನ್ನಲು ಪ್ರತಾಪರುದ್ರನು ಅವ ಳನ್ನು ಸಹಕರಿಸಿ ಸಿಡಿಲ್ನಗೆಯನ್ನು ನಕ್ಕನು.

ರಾತ್ರಿಯ ಹನ್ನೆರಡರ ವೇಳೆಗೆ ತಾವಿಂಥಲ್ಲಿಯೇ ಬಂದಿರ ಬೇಕೆಂದೂ, ವೀರಪ್ಪನು ಭಿಕ್ಷುಕ ಸಂಘದವರಂತೆ ಹೊಲಸಾದ

ಹರಕರಿವೆಯನ್ನು ಧರಿಸಿ ಬರಬೇಕೆಂದೂ ಇಬ್ಬರೂ ನಿಶ್ಚಯಿಸಿದರು.

ವೀರಪ್ಪನತ್ತ ಹೆಜ್ಜೆಯಿಟ್ಟೊಡನೆಯೇ ಪ್ರತಾಪರುದ್ರನು ಪಿಸುಮಾತಿನಲ್ಲಿ "ಅವನೆತ್ತ ಹೋಗುವನೆಂಬುದನ್ನು ನಮ್ಮಲ್ಲೊಬ್ಬರು ನೋಡುತ್ತಿರಿ" ಎಂದು ನರರಕ್ಕಸಿಗೊರೆಯಲು, ಅವಳು ತನ್ನ ಪ್ರಿಯನ ಮಾತಿಗನುಮತಿಸಿ ಮೇಣಬತ್ತಿಯನ್ನು ತೆಗೆದುಕೊಂಡು ವೀರಪ್ಪನೊಡನೆ ನಡೆದಳು.

ಇವನಿನ್ನೂ ಆ ಮನೆಯಿಂದ ಹೊರಹೊರಟು ದಾರಿಯಲ್ಲಿ ಆರೇಳು ಮಾರು ದೂರ ಹೋಗುವಷ್ಟರಲ್ಲಿ ಭಿಕ್ಷುಕ ಸಂಘದವನೊಬ್ಬನು ಇವನನ್ನೇ ಬಹು ಜಾಗ್ರತೆಯಿಂದನುಸರಿಸಿ ಮನೆಗಳ ನೆರಳಿನಲ್ಲಿ ಕಾಣದಂತೆ ನಡೆದು ಬರಲಾರಂಭಿಸಿದನು.

ಇದರರಿವಿಲ್ಲದೆ ವೀರಪ್ಪನು ವೀರಭದ್ರನೂ ಅವನ ಅನುಯಾಯಿಗಳೂ ತನ್ನನ್ನು ಗಂಡಾಂತರಕ್ಕೀಡುಮಾಡಿ ಬಾರದಿದ್ದುದೇ ಳ್ಳೆಯದಲ್ಲವೆಂದು ಮನದಲ್ಲಿ ಮರುಗುತ್ತಾ ಸ್ಮಶಾನ ಮಾರ್ಗದಿಂದತ್ತ ತಿರುಗಲು ಹಿಂದೆ ತಾನೂ ನರರಕ್ಕಸಿಯೂ ಅಡಗಿದ್ದ ಗೂಢಭಾಗದಿಂದೊಬ್ಬನು ಹೊರಬಿದ್ದು ಪಿಸುನುಡಿಯಲ್ಲಿ "ನೀನು ವೀರಪ್ಪನಲ್ಲವೋ?" ಎಂದು ಪ್ರಶ್ನಿಸಲು ಇವನು "ಅಹುದು" ಎಂದನು. ಆಗಾ ಪುರುಷನು ವೀರಭದ್ರನು ಕೆಲವರನ್ನಲ್ಲಿಗೆ ಕಳುಹಿರುವನೆಂದೂ, ಒಂದೊಂದು ಸಂದುಕಟ್ಟಿನಲ್ಲೊಬ್ಬೊಬ್ಬರಿರುವರೆಂದೂ, ಚೌಡೀಗಲ್ಲಿಯಲ್ಲಿಯ ಕಚೇರಿಯಲ್ಲಿ ಅವನನ್ನು ನಾಳೆ ನೋಡತಕ್ಕುದೆಂದೂ, ಪ್ರತಾಪರುದ್ರನ ಅವತಾರವನ್ನು ಮುಗಿಸುವ ಕಾರ್ಯವಲ್ಲಿ ಚರ್ಚಿಸಲಾಗುವುದೆಂದೂ ಸ್ವಲ್ಪದರಲ್ಲಿ ಹೇಳಲು ವೀರಪ್ಪನು ಮರುದಿನ ಪ್ರತಾಪರುದ್ರನು ತಮ್ಮ ಬಲೆಯಲ್ಲಿ ಬೀಳುವಂತೆ

ತಾನು ಮಾಡಿರುವೆನೆಂದು ನುಡಿದೊಡನೆಯೇ ಅವನು ವೀರಪ್ಪನು ಹೋಗಬೇಕಾದ ಮಾರ್ಗವನ್ನರುಹಿ ಮಾಯವಾದನು.

ಈ ಸಂಭಾಷಣೆಯನ್ನು ವೀರಪ್ಪನನ್ನನುಸರಿಸಿದವನು ಅಕ್ಷರಶಃ ಲಕ್ಷ್ಯವಿಟ್ಟು ಕೇಳಿದನು. ಮುಂದೈದು ನಿಮಿಷಗಳಲ್ಲೆಲ್ಲವೂ ಭಿಕ್ಷುಕಸಂಘದಲ್ಲಿದಕ್ಕೆ ಸಂಬಂಧಿಸಿದವರಿಗೆಲ್ಲಾ ಯಥಾಸ್ಥಿತವಾಗಿ ತಿಳಿದುಬಿಟ್ಟಿತು !

---

# ದಿಗ್ಭ್ರಮೆ

ಮಧ್ಯರಾತ್ರಿಗಿನ್ನೂ ಇಪ್ಪತ್ತು ನಿಮಿಷಗಳಿದ್ದುವು. ವೀರಪ್ಪನು ಹಜಾಮನನ್ನೊಬ್ಬನನ್ನು ಎಬ್ಬಿಸಿ ಒಪ್ಪತ್ತಿನ ಮಾತಿಗೆ ಅವನರಿವೆಗಳನ್ನು ಎರವಾಗಿ ಕೊಡಬೇಕೆಂದನು. ಅವನು ಅತಿ ಆಶ್ಚರ್ಯಪಟ್ಟು ಬೇಕಾದುದನ್ನಾರಿಸಿಕೊಳ್ಳಿರೆನ್ನಲು ವೀರಪ್ಪನು ಮಾಸಿದ ಹರಕರಿವೆಗಳಿಂದ ಅಲಂಕೃತನಾಗಿ, ತನ್ನ ರೂಪುಗೆಡುವಂತೆ ಇದ್ದಲಿಂಬೂದಿಗಳಿಂದ ಕೈಕಾಲುಮೋರೆಗಳನ್ನುಜ್ಜಿಕೊಂಡನು.

ಸಂಕೇತಸ್ಥಾನವನ್ನವನು ಸೇರಿದಾಗ ಸರಿರಾತ್ರಿಯಾಗಿತ್ತು. ಮೊದಲೇ ಗೊತ್ತುಮಾಡಲ್ಪಟ್ಟಂತೆ ಪ್ರತಾಪರುದ್ರನಲ್ಲಿದ್ದನು. ಮಾತಾಡುತ್ತಾ ಅವರೊಂದು ಇಕ್ಕಟ್ಟಿನ ಸ್ಥಳಕ್ಕೆ ಬರಲು, ಮಗ್ಗುಲಲ್ಲೊಂದು ಬಂಡಿಯಿದ್ದುದರಿಂದ ವೀರಪ್ಪನು ಪ್ರತಾಪರುದ್ರನನ್ನು ಮುಂದಡಿಯಿಡಹೇಳಿ ತಾನು ಅವನನ್ನನುಸರಿಸಿದನು. ಬಲಗಡೆ ಗಾಡಿಯೂ ಎಡಗಡೆ ಗೋಡೆಯೂ ಇದ್ದ

ಆ ಅತಿ ಇಕ್ಕಟ್ಟಾದ ಸ್ಥಳದಲ್ಲಿ ಪ್ರತಾಪರುದ್ರನು ಒಮ್ಮೆಂ ದೊಮ್ಮೆ ಹಿಂದಿರುಗಿ ರಭಸದಿಂದ ನಡುವಿಗೆ ಕೈಹಾಕಿ ಅವನ ನ್ನೆತ್ತಿ ಗಾಡಿಯಲ್ಲೊಗೆದನು. ಒಳಗಿನೆರಡು ವ್ಯಕ್ತಿಗಳು ವೀರಪ್ಪನ ಬಾಯಿಯಲ್ಲಿ ಬಟ್ಟೆಯನ್ನು ತುರುಕಿ, ಕೈಕಾಲು ಕಣ್ಣುಗಳನ್ನು ಕಟ್ಟಿಬಿಟ್ಟುವು. ಪ್ರತಾಪರುದ್ರನೂ ಹಾರಿ ಕುಳಿತನು; ಗಾಡಿಯು ವೇಗವಾಗಿ ಹೋಗಿಬಿಟ್ಟಿತು.

ಕೆಲಕಾಲಾನಂತರ ಪ್ರತಾಪರುದ್ರನಾಜ್ಞೆಗನುಸಾರವಾಗಿ ನರರಕ್ಷಸಿಯು ವೀರಪ್ಪನ ಬಾಯಿಯಲ್ಲಿದ್ದ ಅರಿವೆಯ ಚಂಡನ್ನು ತೆಗೆದಳು. ಒಂದು ವಿಧದಲ್ಲಲ್ಲದಿದ್ದರೂ ಮತ್ತೊಂದು ವಿಧದಲ್ಲಿ ಅವನಿಗೆಷ್ಟೋ ಹಗುರಾಯಿತು. ಪ್ರತಾಪರುದ್ರನು "ಎಲೋ ಅಜ್ಜಪ್ಪಾ, ನಿನ್ನನ್ನು ಕೊಲ್ಲುವುದು ನಮ್ಮ ಉದ್ದೇಶವಲ್ಲ. ನೀನು ಗದ್ದಲವನ್ನೀಗ ಮಾಡುವುದು ಹಾಗಿರಲಿ—ಒಂದು ವೇಳೆ ಗಟ್ಟಿಯಾಗಿ ಮಾತನಾಡಿದರೆ, ಇಗೋ ನೋಡು! ನಿನ್ನ ಪ್ರಾಣವುಳಿಯುವುದಿಲ್ಲ. ನಿನ್ನ ವರ್ತನದಿಂದಲೇ ನಿನ್ನ ಸ್ಥಿತಿಯಿಂತಾಯಿತು. ನಿನ್ನ ಕ್ರಿಯೆಗಳಿಗಿವು ಪ್ರತಿಕ್ರಿಯೆಗಳು; ಬಂದುದನ್ನನುಭವಿಸು" ಎನ್ನಲು, ವೀರಪ್ಪನು "ಹಾಗಾದರೆ ನನ್ನ ಕೊಲೆಯಾಗುವುದೇ?" ಎಂದನು.

"ನಾವಂಥಾ ಮೂರ್ಖರಲ್ಲ. ನಿನ್ನ ಹೆಣವು ಸತ್ತೆಮ್ಮೆಯಷ್ಟೂ ಬೆಲೆಬಾಳುವುದಿಲ್ಲ. ನಾವು ನಿನ್ನನ್ನಿರಗೊಟ್ಟರೆ ನೀನು ಹೇಗಾದರೂ ಮಾಡಿ ಐದುಸಾವಿರ ರೂಪಾಯಿಗಳನ್ನು ನಮಗಿತ್ತು ಬಂಧಮುಕ್ತನಾಗುವ ಸಂಭವವಿದೆ" ಎಂದುತ್ತರ ಬರಲು ವೀರಪ್ಪನು ಕೈಕಾಲುಗೆಟ್ಟನು. "ಆಯ್ಯೋ ಐದು ಸಾವಿರವೇ?" ಎಂಬ ಉದ್ಗಾರಗಳು ನಿಶಾದೇವಿಯ ಮೌನ

ಸಾಮ್ರಾಜ್ಯವನ್ನು ಮುರಿದುಬಿಡಲು, “ಬಾಯಿ ಮುಚ್ಚು. ನಿನ್ನ ತಲೆಪರಟೆಯು ಕಳಚೀತು” ಎಂದು ಕಾಪಾಲಿಕನು ಪಿಸ್ತೂಲನ್ನೆತ್ತಿದನು.

ಈ ಭಯಂಕರ ಶತ್ರುಗಳ ಗೋಜಿಗೆ ತಾನು ಹೋದುದು ಬೆಕ್ಕಿನ ಮನೆಗೆ ಇಲಿಯು ಕನ್ನವನಿಕ್ಕಿದಂತಾಯಿತೆಂದು ವೀರಪ್ಪನು ಬಹು ಹಳಹಳಿಸಿದನು. ಆದರೂ ಹೊಟ್ಟೆಯಲ್ಲಿದ್ದ ಸಿಟ್ಟು ರಟ್ಟೆಯಲ್ಲಿಲ್ಲದಂತೆ ಅವನ ಸ್ಥಿತಿಯಾಗಿತ್ತು.

“ಐದೇ ಸಾವಿರವೇ?” ಎಂದಷ್ಟರಲ್ಲಿ ನರರಕ್ಕಸಿಯು ನಿರಾಶಾಜನಕ ಧ್ವನಿಯನ್ನೆಳೆದಳು.

ಬಂಡಿಯು ತನ್ನ ಕಟಕಟ ಧ್ವನಿಯನ್ನೆಲ್ಲೆಲ್ಲಿಯೂ ಪ್ರತಿಧ್ವನಿಗೊಳಿಸುತ್ತಾ ವೇಗವಾಗಿ ಓಡುತ್ತಿತ್ತು.

ಮುಂದೊಂದು ಮನೆಯ ಮುಂದದು ಬಂದು ನಿಲ್ಲಲು, ನರರಕ್ಕಸಿಯು ಬಾಗಿಲನ್ನು ತೆಗೆಸಿದಳು. ಎಲ್ಲರೂ ವೀರಪ್ಪನನ್ನು ಮನೆಯಲ್ಲಿನ ಒಂದು ಓಣಿಯಲ್ಲಿ ಬಹುದೂರದವರೆಗೂ ಕೊಂಡೊಯ್ದುನಂತರ ವೀರಪ್ಪನು ಚಿಕ್ಕ ಚಿಕ್ಕ ಮೆಟ್ಟಿಲುಗಳನ್ನಿಳಿದು ಹೋಗಬೇಕಾಯಿತು. ಅದರಂತ್ಯದಲ್ಲಿ ನರರಕ್ಕಸಿಯು ಬೀಗ ಸರಪಳಿಗಳನ್ನು ತೆಗೆದೊಗೆದು ನೆಲಮಾಳಿಗೆಯ ಕಬ್ಬಿಣದ ಬಾಗಿಲುಗಳನ್ನು ತೆರೆದಳು. ಕೂಡಲೇ “ಕರುಣಾಳುಗಳೇ, ಈ ನರಕದಿಂದೆನ್ನನ್ನು ಬಿಡಿಸುವಿರಾ?” ಎಂಬ ಆರ್ತನಾದವು ಅಂತಹ ಆ ವೇಳೆಯಲ್ಲಿ ಬಹುಭಯಾನಕವಾಗುವಂತೆ ಭೂಗರ್ಭದಿಂದ ಬಂದಿತು.

“ನಮ್ಮ ಕರಾರುಗಳನ್ನು ನೀನೊಪ್ಪದ ಹೊರತು ಇದಾಗದು. ನಾವೀಗ ನಿನಗೊಬ್ಬ ಸಂಗಡಿಗನನ್ನು ಕರೆತಂದಿದ್ದೇವೆ; ಇದಕ್ಕಾಗಿಯಾದರೂ ನೀನು ನಮಗೆ ಕೃತಜ್ಞನಾ

ಗಿರಬೇಕು" ಎಂದು ಪ್ರತಾಪರುದ್ರನೆಂದನು.

"ನೀಚರೇ, ನಿಮ್ಮ ನಾಶವಾಗಲಿ!" ಎಂದು ಕಳವಳಗೊಂಡು ಬಹು ಕೇಂದ್ರೀಕರಿಸಿದ ಕೋಪದಿಂದವನು ಶಪಿಸಿ ಸುಮ್ಮನಾದನು.

ಇಷ್ಟರಲ್ಲಿ ಕಾಪಾಲಿಕನು ವೀರಪ್ಪನನ್ನು ಆ ನೆಲವನೆಯೊಳಕ್ಕೆ ನೂಕಿಬಿಟ್ಟನು; ದ್ವಾರವು ಮಹಾರಭಸದಿಂದ ಒಡನೆಯೇ ಮುಚ್ಚಲ್ಪಟ್ಟಿತು. ಸರಪಳಿಗಳನ್ನು ಸರಿಸಿದ ಹಾಗೂ ಚಿಲಕ ಕೀಲಿಗಳನ್ನು ಹಾಕಿದ ಶಬ್ದವು ಕೆಳಗಿನವರಿಗೆ ಕೇಳಿಬಂದುದಲ್ಲದೆ, ಕ್ರಮೇಣ ಒಬ್ಬೊಬ್ಬರಾಗಿ ಮೇಲಕ್ಕೇರಿ ಹೋದ ಹೆಜ್ಜೆಗಳ ಸಪ್ಪಳವೂ ಅಸ್ಪಷ್ಟವಾಗಿ ಕೇಳಿಸಿದುವು.

ಎಲ್ಲೆಲ್ಲಿಯೂ ನಿಶ್ಶಬ್ದತೆಯಾಗುವವರೆಗೂ ವೀರಪ್ಪನು ಅಚಲನಾಗಿ ಉಸಿರಾಡದೆ ಸ್ವೈಮರೆತು ನಿಂತಲ್ಲಿಯೇ ನಿಂತುಬಿಟ್ಟಿದ್ದನು. ನಂತರ ತನ್ನ ಕಣ್ಣಿಗೆ ಕಟ್ಟಿದುದನ್ನು ಕಿತ್ತೊಗೆದು—ಅಲ್ಲಿ ನಿತ್ಯ ಅಮಾವಾಸ್ಯೆಯಿದ್ದುದರಿಂದ ನಯನೇಂದ್ರಿಯವು ವ್ಯರ್ಥವೆಂದೆನಿಸಲು—ತನ್ನ ಹೀನಸ್ಥಿತಿಗಾಗಿ ಮನನೊಂದು ಶೀತವೇರಿದ ನೆಲದ ಮೇಲೆಲ್ಲಿಯೋ ಕುಳಿತು ಸುತ್ತಲೂ ಕೈಯಾಡಿಸತೊಡಗಲು ಮೊದಲಿದ್ದ ಬಂದಿಯು ಮೊದಲು ಮಾತನಾಡಲುಪಕ್ರಮಿಸಿದನು.

"ಅಯ್ಯೋ ದುರ್ದೈವಿಯೇ, ನೀನಾರು? ಈ ಗವಿಯ ಕ್ರೌರ್ಯಕ್ಕೆ ನನ್ನಂತೆಯೇ ನೀನೂ ಈಡಾದುದೆಂತು?"

"ಅಹುದು. ನಾನತ್ಯಂತ ದುರ್ದೈವಿಯೆಂಬುದು ನಿಜ."

ವೀರಪ್ಪನು ಇಷ್ಟರಲ್ಲಿ ದುಃಖಾಶ್ಚರ್ಯಗಳಿಂದ ಹುಚ್ಚನಾಗಿದ್ದನು. ಆ ವ್ಯಕ್ತಿಯ ಧ್ವನಿಯು ತನಗಪರಿಚಿತವಲ್ಲವೆಂದು ಅವನ ಭಾವನೆಯಾಗಲು ಅವನು ಮತ್ತೂ ಭ್ರಾಂತ

ನಾದನು.

"ಆದರೂ ನೀನು ನನ್ನಷ್ಟು ದುರ್ದೈವಿಯಲ್ಲ, ಅಪರಿಚಿತನೇ! ಏನೆನ್ನಲಿ!! ನನ್ನಂಥಾ ಸಜ್ಜನನಿಗೆ ಆಗಬಾರದುದೆಲ್ಲಾ ಆಗಿಹೋದುದನ್ನೊಮ್ಮೆ ನೆನೆಸಿಕೊಂಡರೆ ಹುಚ್ಚು ಹಿಡಿದಂತಾಗುತ್ತದೆ—ಘನ ಹುಚ್ಚು."

"ದುರ್ದೈವಿಯೇ, ದುಃಖಿಸಬೇಡ. 'ದೈವೀ ವಿಚಿತ್ರಾ ಗತಿಃ' ಎಂಬುದು ಸುಳ್ಳಲ್ಲ, ಆಕಸ್ಮಿಕವಾಗಿ ದುರ್ದೈವಿಗಳಿಬ್ಬರೂ ಒಂದೆಡೆಯಲ್ಲಿ ಸೇರಿರುವುದರಿಂದ ನಾವು ಮೊದಲು ಪರಿಚಯವನ್ನು ಮಾಡಿಕೊಳ್ಳೋಣ. ನಾನು ವೀರಪ್ಪನೆಂಬುವನು; ವ್ಯವಹಾರಸ್ಥರಾದ ಶೇಷಯ್ಯಶೆಟ್ಟಿ ಮತ್ತು ಸುಬ್ರಾಯಶೆಟ್ಟಿ ಇವರಲ್ಲಿ ಕೆಲಸಕ್ಕಿದ್ದೇನೆ—ಅಥವಾ ಇದ್ದೆ."

ಹಳೆಯ ಸೆರೆಯಾಳು ನಡುವೇ ಬಾಯಿಹಾಕಿ ಹೇಳಿದನು. "ನನ್ನ ವಿಚಾರವನ್ನೀಗ ಕೇಳು. **ನನ್ನ ಹೆಸರು ಮೃತ್ಯುಂಜಯನೆಂದು**—"

ಈ ಹೆಸರನ್ನು ಕೇಳಿದೊಡನೆಯೇ ವೀರಪ್ಪನು ನಿಜವಾಗಿಯೂ ನೆಲಕ್ಕುರುಳಿದನು. ಅವನತ್ತ ಏನೂ ತಿಳಿಯದೆ ಸುಮ್ಮನಾಗಲು ವೀರಪ್ಪನು ಅಲ್ಲಿದ್ದ ಅತಿ ಕತ್ತಲೆಯನ್ನು ಭೇದಿಸಿ ಆ ವ್ಯಕ್ತಿಯನ್ನು ನೋಡಲೆಂದು ಕಣ್ಣುಗಳನ್ನರಳಿಸಿದನು. ಪಾತ್ರೆಯಲ್ಲಿ ತುಂಬಿಕೊಳ್ಳಲು ಸಾಧ್ಯವಾಗುವಷ್ಟು ಶುಭ್ರವಾದ ಬೆಳದಿಂಗಳು ನಮ್ಮ ಕವಿಗಳ ಕಾವ್ಯದಲ್ಲಿ ಬಿದ್ದಿರುವಂತೆ ಉಂಡೆಯನ್ನು ಕಟ್ಟುವಷ್ಟು ದಟ್ಟವಾದ ಕಗ್ಗತ್ತಲೆಯು ಈ ನೆಲವನೆಯಲ್ಲಿ ನೆಲಸಿತ್ತು. ವೀರಪ್ಪನು ಅತ್ಯಾಶ್ಚರ್ಯದಿಂದಲೂ ಭಯದಿಂದಲೂ "ಮೃತ್ಯುಂಜಯ!" ಎಂದುಚ್ಚರಿಸಲು ತನ್ನ ಹೆಸರನ್ನು ಕೇಳಿದುದರಿಂದ ಇಂತಹ

ಭಯಂಕರ ಪರಿಣಾಮವಾದುದನ್ನರಿತು ಅವನು ಬೆಚ್ಚಿಬಿದ್ದು, "ವೀರಪ್ಪಾ, ನಾನು ಆ ವ್ಯಕ್ತಿಯೇ ಹೌದು. ನನ್ನ ದುರದೃಷ್ಟಗಳೆಲ್ಲವೂ ನಿನಗೆ ತಿಳಿದಿರುವ ಸಂಭವವುಂಟೇ ?" ಎಂದು ಪ್ರಶ್ನಿಸಿದನು.

ವೀರಪ್ಪನು ರೋಮಾಂಚಿತನಾಗಿ ಕೇಳಿದನು. "ದುರದೃಷ್ಟಗಳೇ!!"

ಮೃತ್ಯುಂಜಯನು ವಿಷಾದಿತನಾಗಿ ನುಡಿದನು:

"ಅಹುದು. ಅನುಪಮ ದುರದೃಷ್ಟಗಳು. ನಿನ್ನ ಮೋರೆಯು ನನಗೆ ಕಾಣದಿದ್ದರೂ ಸಹ, ನೀನು ಕೌತುಕದಲ್ಲಿ ಅಥವಾ ಭ್ರಾಂತಿಭಾವನೆಯಲ್ಲಿ ತೊಳಲುತ್ತಿರುವುದನ್ನು ನಿನ್ನ ಮನಃಸ್ಥಿತಿಯಿಂದಲೂ ಧ್ವನಿಯಿಂದಲೂ ನಾನು ತರ್ಕಿಸಬಲ್ಲೆನು. ವೀರಪ್ಪಾ, ನಾನು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ, ನನ್ನ ಪ್ರಶ್ನೆಗುತ್ತರಕೊಡು. ನನ್ನ ವಿಷಯವಾಗಿ ನಿನಗೇನು ಗೊತ್ತಿದೆ? ನಮ್ಮ ಗ್ರಾಮವಲ್ಲಿಯ ಭಯಂಕರ ಘಟನೆಗಳ ವಿಷಯವಾಗಿ ಪ್ರಪಂಚಕ್ಕೇನು ತಿಳಿದಿದೆ? ಆ ಅತಿದುರುಳನಾದ ದುರ್ಜಯನೂ ನೀಚನಾದ ನಾಗಶೆಟ್ಟಿಯೂ ಏನಾದರು ?"

ವೀರಪ್ಪನು ಅವನ ಮಾತನ್ನು ಅಲ್ಲಿಯೇ ನಿಲ್ಲಿಸಿದನು:

"ಹಾಗಾದರೆ ನನ್ನನ್ನು ವಿಸ್ಮಯಗೊಳಿಸಲೇ ಬೇಕೆಂದು ನಿನ್ನ ಇಚ್ಛೆಯೋ? ನಿನ್ನ ಪ್ರಶ್ನೆಗಳಿಗೆ ಉತ್ತರಕೊಡುವ ಪೂರ್ವದಲ್ಲಿ ಇದೊಂದು ಮಾತನ್ನು ಹೇಳಿಬಿಡುತ್ತೇನೆ. ಲಕ್ಷ್ಯವಿಟ್ಟು ಕೇಳು. ಈ ದುಃಖಮಯವಾದ ಬಂದಿವಾಸವು ನಿನ್ನ ದೆಸೆಯಿಂದಲೇ ನನಗುಂಟಾಯಿತು."

ಮೃತ್ಯುಂಜಯನು ಬೆಚ್ಚಿಬಿದ್ದನು:

"ಏನು ನನ್ನ ದೆಸೆಯಿಂದಲೇ !!!"

ವೀರಪ್ಪನು ಸ್ವಲ್ಪ ಸಿಟ್ಟಿನಿಂದ ಅಧಿಕಾರಯುಕ್ತವಾದ ವಾಣಿಯಲ್ಲಿ ಹೇಳಿದನು.

"ಅಹುದು, ನಿನ್ನ ದೆಸೆಯಿಂದ. ನಿನ್ನ ಕಾರ್ಯದಲ್ಲಿ ನಾನು ಕೈಹಾಕದಿದ್ದರೆ ಆ ದರೋಡೆಕೋರನು ನನಗೆ ಗಂಟುಬೀಳುತ್ತಿರಲಿಲ್ಲ; ಈ ಸೆರೆಮನೆ ವಾಸಕ್ಕೂ ಆಸ್ಪದ ವಿರುತ್ತಿರಲಿಲ್ಲ. ಇದಕ್ಕೆಲ್ಲಾ ಮೊನ್ನೆಯ ರಾತ್ರಿ ನಿನ್ನನ್ನು ನಾನು ಇಂದ್ರಭವನದಲ್ಲಿ ಕಂಡುದೂ, ಪೋಲೀಸರೊಡನೆ ಕುದುರೆಯ ಗಾಡಿಯಲ್ಲಿ ಕುಳಿತು ನಿನ್ನನ್ನು ಬೆನ್ನಟ್ಟಿದುದೂ, ನೀನು ನನಗೆ ಹೆದರಿ ದುರ್ಗದ ಮಾರ್ಗದಲ್ಲಿ ತಲೆತಪ್ಪಿಸಿಕೊಂಡು ಓಡಿಹೋದುದೂ—"

"ಎಲೋ ನೀಚರೇ, ನನ್ನನ್ನು ನೆಲೆಗಾಣದ ನೋವಿನ ಜಲಧಿಯಲ್ಲಿ ಮುಳುಗಿಸಲೆಂದೇ ಹುಚ್ಚನೊಬ್ಬನನ್ನು ಸಂಗಡಿಗನೆಂದಿಲ್ಲಿಗೆ ತಟ್ಟಿರುವಿರಾ !! ಅಯ್ಯೋ ಪಾತಾಳವೇ, ನಿನ್ನ ಕಾರ್ಯಕ್ಕೆ ಇಂತು ಕಳಸವನ್ನಿಟ್ಟುಕೊಂಡೆಯಾ ?" ಎಂದು ಮೃತ್ಯುಂಜಯನು ವೀರಪ್ಪನ ವಚನಗಳೆಲ್ಲವೂ ಕರತಲಾಮಲಕವಾಗಿರಲು ಲವಲೇಶವಾದರೂ ನಟನೆಯಿಲ್ಲದೆ ಏನೂ ಸಂಶಯವಿಲ್ಲದವನಾಗಿ ಹೀಗೆ ಹೇಳಿ ಹಣೆಯನ್ನು ಬಡಿದುಕೊಂಡನು.

ವೀರಪ್ಪನು ಮುಂದಡಿಯಿಟ್ಟು ನಿಧಾನವಾಗಿ ನುಡಿದನು:

"ಮೃತ್ಯುಂಜಯ, ಸ್ವಲ್ಪ ತಾಳು. ನಾವಿಬ್ಬರೂ ಹೇಗೋ ತಪ್ಪು ಕಲ್ಪನೆಯ ಬಲೆಯಲ್ಲಿ ಬಿದ್ದಿದ್ದೇವೆ. ಸ್ವಲ್ಪ ಸಮಾಧಾನವುಳ್ಳವರಾದರೆ ಸತ್ಯತೆಯು ಸ್ಪಷ್ಟವಾಗುವುದು. ನನ್ನ ಪಾಲಕರು ನನ್ನನ್ನು ನರಕವಿಮುಕ್ತನನ್ನಾಗಿ ಶೀಘ್ರ

ದಲ್ಲಿಯೇ ಮಾಡದಿದ್ದರೆ ನನಗೆ ಇನ್ನು ಮುಂದೆ ಬಹುಶಃ ಹುಚ್ಚುಹಿಡಿಯಬಹುದಾದರೂ, ನಾನೀಗ ಸತ್ಯವಾಗಿ ಹೇಳುತ್ತೇನೆ; ನೀನಿದನ್ನು ಧೈರ್ಯವಾಗಿ ನಂಬು—ನಾನು ಹುಚ್ಚನಲ್ಲ. ”

ಮೃತ್ಯುಂಜಯನು ವೀರಪ್ಪನ ಮಾತನ್ನು ನಂಬಲಾರದ ಸ್ಥಿತಿಯಲ್ಲಿದ್ದರೂ ಅವನನ್ನು ಒರೆಹಚ್ಚಿನೋಡಲೆಂದು ಕೇಳಿದನು:

“ ಮೊನ್ನೆಯ ರಾತ್ರಿ ಇಂದ್ರಭವನದಲ್ಲಿ ನೀನು ನನ್ನನ್ನು ನೋಡಿದೆನೆಂದು ಹೇಳಲಿಲ್ಲವೇ ? ”

ವೀರಪ್ಪನು ಉತ್ತರಕೊಟ್ಟನು: “ ಹೌದೇ ಹೌದು. ಇದಲ್ಲದೆ ಬಹುಮಾನಪೂರ್ವಕವಾಗಿ ಮಾತಾಡಿಸಿದೆನು. ನೀನು ಉತ್ತರವನ್ನು ಸಹ ಕೊಡದೆ ಬಹು ಸೊಕ್ಕಿನಿಂದ ಅತ್ತ ತಿರುಗಿಕೊಂಡೆ. ”

ಮೃತ್ಯುಂಜಯನೆಂದನು: “ ಇದರಲ್ಲೇನೋ ವಿಚಿತ್ರತಮ ಭ್ರಾಂತಿಯಿದೆ. ಏಕೆಂದರೆ ನನ್ನ ಇಡೀ ಜೀವನದಲ್ಲಿ ನಾನು ಆ ಸ್ಥಳಕ್ಕೆ ಹೋಗಿಲ್ಲ; ಇದಲ್ಲದೆ ನೀನು ಹೇಳುವ ರಾತ್ರಿ ನಾನು ಈ ನರಕದಲ್ಲಿಯೇ ಕೊಳೆಯುತ್ತಿದ್ದೆ. ”

ಅಚ್ಚರಿಯಿಮ್ಮಡಿಸಲು ವೀರಪ್ಪನೆಂದನು: “ಹಾಗಾದರೆ ನೀನು ಮೃತ್ಯುಂಜಯನೇ ? ”

ಮೃತ್ಯುಂಜಯನು ನಡಗುವ ಧ್ವನಿಯಲ್ಲಿ ನುಡಿದನು: “ ಅಹುದೆಂದು ನಾನಾಗಲೇ ಭರವಸೆಯನ್ನು ಕೊಡಲಿಲ್ಲವೇ ? ವೀರಪ್ಪಾ, ಇನ್ನೊಮ್ಮೆ ಕೇಳು. ಆ ದುರ್ದೈವಿಯಾದ—ಅತ್ಯಂತ ನೋವಿಗೀಡಾದ—ಮೃತ್ಯುಂಜಯನೇ ನಾನು ! ”

ವೀರಪ್ಪನು ಕೇಳಿದನು: "ನೀನಿಲ್ಲಿಗೆಂದು ಬಂದೆ? ನಾವು ವಾರ ತಿಥಿಗಳನ್ನೆಣಿಸುತ್ತಾ ಹೋದರೆ ಎಲ್ಲವೂ ಸರಿ ಹೋಗಬಹುದು. ವಿಜಯಪುರದ ಕ್ರೌರ್ಯವು ಸೋಮವಾರ ಎಂದರೆ ಪುಷ್ಯ ಬಹುಳ ಪಂಚಮಿಯ ರಾತ್ರಿಯಲ್ಲಿ ಘಟಿಸಿತು."

ಮೃತ್ಯುಂಜಯನೆಂದನು: "ಆ ಭಯಂಕರ ಕೃತ್ಯಗಳು ನಡೆದ ಮರುಕ್ಷಣದಲ್ಲಿಯೇ ನನ್ನ ಬಾಯಿಯಲ್ಲಿ ಬಟ್ಟೆಯನ್ನು ತುರುಕಿ, ಚೀಲವೊಂದರಲ್ಲಿ ನನ್ನನ್ನು ಹಾಕಿ ಬಿಗಿದು, ಕುದುರೆಯ ಗಾಡಿಯಿಂದಿಲ್ಲಿಗೆ ನನ್ನನ್ನಿವರು ಕರೆತಂದರು. ನಾನೀ ನರಕದಲ್ಲಿ ಹೊಗಿಸಲ್ಪಟ್ಟಾಗ ಷಷ್ಠಿಯ ಬೆಳಗಿನ ಆರು ಗಂಟೆಯಾಗಿರಬಹುದೆಂದು ತರ್ಕಿಸಿರುವೆನು."

ವೀರಪ್ಪನಾಶ್ಚರ್ಯಚಕಿತನಾಗಿ ನುಡಿದನು: "ನೀನೇನೇ ಹೇಳು, ಮರುದಿನ ಮಂಗಳವಾರ ಎಂದರೆ ಷಷ್ಠಿಯ ಸಾಯಂಕಾಲ ನಾನು ನಿನ್ನನ್ನು ನಿಸ್ಸಂಶಯವಾಗಿ ದೇವರಾಣೆಗೂ ಇಂದ್ರಭವನದಲ್ಲಿ ಸಂದರ್ಶಿಸಿರುವೆನು. ಇಲ್ಲ! ನಾನೆಷ್ಟೂ ತಪ್ಪಿಲ್ಲ!! ಮಂಗಳವಾರದ ದಿನವೇ ರಾತ್ರಿ ಎಂಟು ಗಂಟೆಯ ಹೊತ್ತಿಗೆ ದುರ್ಗದ ಮಾರ್ಗದಲ್ಲಿ ನಾನು ನಿನ್ನನ್ನು ಬಿಟ್ಟೆದುದು—ಬುಧವಾರದ ರಾತ್ರಿ ನಾನಿದ್ದುದು ಭಿಕ್ಷುಕಸಂಘದಲ್ಲಿ—ಈಗಾಗಲೇ ರಾತ್ರಿ ಎರಡು ಗಂಟೆಯಾಗಿದ್ದರೂ ನಮಗೀಗ ಭ್ರಾಂತಿಯುದಿಸಲವಕಾಶವನ್ನೀಯದಂತೆ ಗುರುವಾರ ರಾತ್ರಿಯೆಂದೇ—"

ಮೃತ್ಯುಂಜಯನು ಉತ್ಕಂಠಿತನಾದನು: "ನಾನು ಇನ್ನೊಮ್ಮೆ ಒತ್ತಿ ಹೇಳುತ್ತೇನೆ; ಇಂದ್ರಭವನದಲ್ಲಿ ನನ್ನನ್ನು ನೋಡಿದೆನೆಂದು ನೀನು ಕನವರಿಸುವ ಆ ವೇಳೆಯ ಹೊತ್ತಿಗೆ

ನಾನಿವರ ಅತಿಥಿಯಾಗಿ ನೆರಳಲಾರಂಭಿಸಿ ಎಷ್ಟೋ ತಾಸುಗಳಾಗಿದ್ದುವು. ಈಗ ಹೇಳು, ನಾನೆಂದು ನೀನು ಭ್ರಮಿಸಿದ ಆ ವ್ಯಕ್ತಿಯನ್ನು ದುರ್ಗದ ಮಾರ್ಗದ ವರೆಗೂ ನೀನೇಕೆ ಬೆನ್ನಟ್ಟಿಹೋದೆ ? ”

ವೀರಪ್ಪನು ವಿವರಿಸಿದನು: “ ನಿಜವನ್ನು ನುಡಿಯುವುದಾದರೆ, ನನ್ನ ಕಾರ್ಯವನ್ನು ಮರೆತು ಈ ಹುಚ್ಚಾಟದಲ್ಲಿ ಕೈಹಾಕಲು ನನಗೊಂದು ಆಮಿಷವಿತ್ತು. ನಿನ್ನನ್ನು ಹಿಡಿದು ಕೊಟ್ಟವರಿಗೆ ಬಹುಮಾನವು ದೊರೆಯುವುದೆಂದು ನನಗೂ ತಿಳಿಯಬಂದಿತ್ತು. ”

ಮೃತ್ಯುಂಜಯನು ಉದ್ವಿಗ್ನಚಿತ್ತನಾಗಿ “ ಅಯ್ಯೋ! ಪಾಪಿಯೇ ! ಹಾಸ್ಯದಿಂದೆನ್ನನ್ನು ಕೊಲ್ಲುವೆಯಾ ? ನೊಂದ ಹೃದಯವನ್ನಿಂತು ಇರಿಯುವೆಯಾ ? ” ಎಂದು ತಡವರಿಸಿ ವೀರಪ್ಪನೆಡೆಗೆ ಸರಿದುಬರಲಾರಂಭಿಸಿದನು.

ವೀರಪ್ಪನು ನೆಲಮಾಳಿಗೆಯ ಒಂದು ಮೂಲೆಯ ಕಡೆಗೋಡಿ “ ಓಹೋ, ಇದೇನು ? ಮೃತ್ಯುಂಜಯಾ, ದೂರ ನಿಂತು ನುಡಿ !! ನಿನ್ನನ್ನು ದೊಚ್ಚಿಗೆಬ್ಬಿಸಲೆಂದು ನಾನಿಂತು ನುಡಿಯಲಿಲ್ಲ—ನಾನು ಹೇಳಿದ ಪ್ರತಿ ಅಕ್ಷರವೂ ಸತ್ಯ ” ಎಂದು ಚೀರಿದನು. ಭಯಾನಕವಾದ ಪ್ರತಿಧ್ವನಿಯಿಂದ ವೀರಪ್ಪನು ಭಯಭ್ರಾಂತನಾದರೂ ನೆಲಮಾಳಿಗೆಯ ಹೊರ ಭಾಗದಲ್ಲಿ ಸದ್ದಿನ ಮರಿಯೂ ನುಸಿದು ಹೋಗುವಂತಿರಲಿಲ್ಲ.

ಏನೋ ಹೊಳೆದಂತಾಗಲು ಮೃತ್ಯುಂಜಯನು: “ಸತ್ಯ!!! ಓಹೋ, ನನಗೀಗ ಸತ್ಯವು ತಿಳಿಯಲಾರಂಭಿಸಿತು. ಆ ಪಾಷಂಡಿಗಳು—ಆ ದುರ್ಜಯನೂ ನಾಗಶೆಟ್ಟಿಯೂ—ನನ್ನ ಹೆಸರಿಗೇ ಕಳಂಕ ತಂದಿರಬಹುದು. ಒಂದು ವೇಳೆ ನನ್ನ

**ಮೇಲೆ** ಅಂತಹ ಕಾರ್ಯಗಳ ಅಪವಾದವನ್ನು ಹೊರಿಸಬಹುದು—ವೀರಪ್ಪಾ, ಈ ಕಲ್ಪನೆಯಿಂದ ನನಗೆ ಹುಚ್ಚು ಹಿಡಿಯುತ್ತಿದೆ. ನೀನು ನನ್ನ ಕೋಪವನ್ನು ದಯಮಾಡಿ ಕ್ಷಮಿಸು. ಒಬ್ಬರ ಅರ್ಥವನ್ನೊಬ್ಬರು ಈಗ ಗ್ರಹಿಸೋಣ."

ವೀರಪ್ಪನು ಸಮ್ಮತಿಯನ್ನು ಸೂಚಿಸಿ "ನನಗೂ ಅದೇ ಬೇಕಾಗಿದೆ. ಆದರೆ ಈಗ ನಾನು ಎಷ್ಟು ಭಯಭ್ರಾಂತ ಮನಸ್ಕನಾಗಿರುವೆನೆಂದರೆ ನನ್ನ ವಿಚಾರತರಂಗಗಳನ್ನು ವಿಂಗಡಿಸಲು ನನಗೇನೂ ತೋಚುವಂತಿಲ್ಲ."

ಮೃತ್ಯುಂಜಯನು ಹೇಳಿದನು: "ಹಾಗಾದರೆ ಪ್ರಶ್ನಿಸುವ ಕಾರ್ಯವು ನನಗಿರಲಿ. ಎಲ್ಲವನ್ನೂ ಕರತಲಾಮಲಕವನ್ನಾಗಿಸುವುದು ನನ್ನ ಕೆಲಸ. ಈಗ ಉತ್ತರ ಕೊಡು. ನನ್ನನ್ನು ಹಿಡಿದುಕೊಟ್ಟವರಿಗೆ ಬಹುಮಾನವನ್ನೀಯುವುದರ ಮರ್ಮವೇನು ? "

ವೀರಪ್ಪನು ಹಿಂದೆಮುಂದೆ ನೋಡುತ್ತಾ: "ಹಾಗಾದರೆ ಹೇಳಿಬಿಡಲೋ ? " ಎನ್ನಲು ಮೃತ್ಯುಂಜಯನು ಜೋರಿನಿಂದ: "ಹೂ, ಹೇಳು. ನನ್ನ ವಿರುದ್ಧವಾಗಿ ಏನು ಕೇಡು ನುಡಿದರೂ ಅದನ್ನು ಕೇಳಿಕೊಳ್ಳುವಷ್ಟು ಸಹನೆಯು ನನ್ನಲ್ಲಿದೆ " ಎಂದನು.

"ನೀನು ಮಹಾಪರಾಧಿಯೆಂದು ತಿಳಿಯಬಂದಿದೆ" ಎಂದೆನ್ನಲು ಮೃತ್ಯುಂಜಯನು ಸಾವಧಾನವಾಗಿ "ಆ ಅಪರಾಧವಾವುದು ? " ಎಂದು ಕೇಳಿದನು.

ವೀರಪ್ಪನು ಉತ್ತರಿಸಿದನು: "ಅಪರಾಧಗಳಾವುವು? ಎಂದು ಕೇಳು. ಏಕೆಂದರೆ ನೀನು ಮಾಡಿದುದು ಒಂದೇ ಅಪರಾಧವಲ್ಲ—ಮೋಸಮಾಡಿದ್ದೆ, ಮನೆ ಸುಟ್ಟೆ, ಫೋರ್ಜರಿ

(ಕಳ್ಳ ಕೈಬರೆಹ) ಮಾಡಿದೆ, ಕೊನೆಗೆ ಅಗ್ನಿಸಾಕ್ಷಿಯಾಗಿ ಕೈವಿಡಿದ ಹೆಂಡತಿಯನ್ನೇ ಕೊಂದುಬಿಟ್ಟೆ."

"ಮಹಾಪಾಪಂಡಿಗಳು!! ಭಯಂಕರ ಘಾತುಕರು!!" ಎಂದೊದರಿ ಮೃತ್ಯುಂಜಯನು ದುಃಖಾತಿರೇಕದಿಂದ ಮೂಕನಾದನು. ಅವನು ಅತಿ ಆವೇಶಯುಕ್ತನಾಗಿ ಮರು ಕ್ಷಣದಲ್ಲಿಯೇ ಕೆಳಗುರುಳಿ ಕೈಗಳೆರಡರಿಂದಲೂ ಹಣೆಯನ್ನು ಬಡಿದುಕೊಳ್ಳಲಾರಂಭಿಸಿದುದನ್ನು ವೀರಪ್ಪನು ಕೇಳಿದನು.

ನಂತರ ಬಹಳ ಕಾಲದವರೆಗೂ ಆ ಕಗ್ಗವಿಯಲ್ಲಿ ಗೋರಿಯಲ್ಲಿನ ಮೌನವು ಮನೆಮಾಡಿತು.

---

# ಚಿತ್ರಮಯ ಚರಿತ್ರೆ

ಈ ಭೀಕರ ಮೌನವನ್ನು ಮೃತ್ಯುಂಜಯನೇ ಭಂಗಗೊಳಿಸಿದನು. ಅಂತಃಕರಣವು ಅತ್ಯಂತ ಕರಗಿದವರಿಗೆಸ್ವಾಭಾವಿಕವಾದ ಅಸ್ವಾಭಾವಿಕ ಗಾಂಭೀರ್ಯವೂ, ಮಾಂದ್ಯವೂ ಇವನ ಮಾತಿನಲ್ಲಿದ್ದುವು.

"ನನ್ನ ಹೊಸ ಬಂಧುವೇ, ವಿಷಾದಮಯವಾದ ನನ್ನವೆಲ್ಲ ವಿಷಯಗಳನ್ನೂ ಕೇಳಿ ನೀನೂ ವಿಷಾದಿಸು. ಅನುತಾಪವುಳ್ಳವರ ಅನುತಾಪದಿಂದ ದುಃಖಿಗಳ ದುಃಖವು ಕೆಲಮಟ್ಟಿಗೆ ಕಡಿಮೆಯಾಗುವುದೆಂದು ಕೇಳಿದ್ದೇನೆ. ಸಾಯುವ ನೋವಿನಲ್ಲಿರುವವರ ನೋವು "ಅಯ್ಯೋ, ಪಾಪ" ಎಂಬ ಅನುತಾಪಸ್ವರದಿಂದ ಅದೆಷ್ಟೋ ಶಾಂತವಾಗುವುದು. ಈ ನಿಷ್ಕ

ರುಣಿಯಾದ ಧರಣಿಯು, ಕವಿಗಳಿಗೆ ದೇವಿಯಾಗಿದ್ದ ಈ ಧಾತ್ರಿಯು, ನನ್ನ ಪಾಲಿಗೆ ಅಸುರಳಾಗಿ ನನ್ನನ್ನು ರಿಸಿದೆ. ಎಲ್ಲ ವಿವರವನ್ನೂ ಕೇಳಿ ನೀನು ಬೇಕಾದ ಅಭಿಪ್ರಾಯವನ್ನು ನನ್ನ ವಿಷಯದಲ್ಲಿ ತಾಳು. ಈ ಶತ್ರುಗಳು ಕೆಲ ಕರಾರುಗಳಿಗೊಪ್ಪ ಬೇಕೆಂದು ಬಹು ಪೀಡಿಸುತ್ತಿದ್ದರೂ ಮೊದಲಿನಿಂದಲೂ ನಾನು ಧಿಕ್ಕರಿಸುತ್ತಿದ್ದೆನು—ಇನ್ನಂತೂ ಅವುಗಳನ್ನೊಪ್ಪು ವುದೇ ಇಲ್ಲ. ಇದರಲ್ಲಿ ಅವರ ಉದ್ದೇಶವೇನಿರಬಹುದೆಂ ಬುದು ನನಗೀಗ ಕೆಲಮಟ್ಟಿಗೆ ಹೊಳೆದಿದೆ. ಒಂದು ವೇಳೆ ನೀನೆಂದಾದರೂ ಬಂಧವಿಮೋಚನೆಯನ್ನು ಹೊಂದಿದರೆ, ವೀರಪ್ಪಾ ನನಗೆ ವಚನಕೊಡು. ನೀನು ನನ್ನನ್ನು ಕೈಬಿಡು ವುದಿಲ್ಲವಷ್ಟೇ?—ಅಂಧಳಾದ ನ್ಯಾಯದೇವತೆಯ ಮುಂದೆ ಸತ್ಯವನ್ನು ಸ್ಥಾಪಿಸಿ ನನಗೆ ನ್ಯಾಯವು ಸಿಕ್ಕುವಂತೆ ಮಾಡು ವೆಯಲ್ಲವೇ?"

"ಮಾಡಿಯೇ ಮಾಡುವೆನು. ಇದು ನನ್ನ ವಚನ" ಎಂದ ವನು ಭರವಸೆಯನ್ನೀಯಲು ಮೃತ್ಯುಂಜಯನು ಸಂತುಷ್ಟ ನಾದಂತೆ ತೋರಿತು.

"ನನಗೀಗ ೩೭ ವರ್ಷಗಳು. ಮೊನ್ನೆಮೊನ್ನೆಯವರೆಗೆ ನಾನೂ ದುಃಖವೂ ತೀರ ಅಪರಿಚಿತರಾಗಿದ್ದೆವು. ನನ್ನ ೧೭ ನೆಯ ವಯಸ್ಸಿನಲ್ಲಿ ತಾಯಿಯೂ ೧೮ ರಲ್ಲಿ ತಂದೆಯೂ ತೀರಿ ಕೊಂಡುದು ದಿಟವಾದರೂ ಇವು ಪ್ರಕೃತಿಸಿದ್ಧವಾದ ಜನ ಸಾಮಾನ್ಯವಾದ ದುಃಖಗಳಾದುದರಿಂದ ಪ್ರಾಪಂಚಿಕ ದುಃಖಗಳ ಮಾಲಿಕೆಯಲ್ಲಿ ಇವುಗಳನ್ನೂ ಸೇರಿಸಲಾಗದು. ನಾನು ೨೧ ನೆಯ ವಯಸ್ಸಿಗೇರಿದಾಗ ೨೫೦೦೦ ರೂ.ಗಳ ಆಸ್ತಿಯ ಮಾಲಕನಾಗಿ ಚಿಂತಾರಹಿತ ಜೀವನದಲ್ಲಿದ್ದೆನು.

ದೇಶಾಟನೋದ್ದೇಶದಿಂದ ನಾನು ನನ್ನ ಮಿತ್ರರೊಡನೆ ಹೊರಡುವಾಗ ನಂಬಿಗಸ್ಥನೊಬ್ಬನನ್ನು ನಮ್ಮ ಆಸ್ತಿಯನು ನೋಡಿಕೊಳ್ಳುತ್ತಿರಲು ನೇಮಿಸಿದೆನು. ನಿಸರ್ಗದೇವತೆಯು ನಿತ್ಯಯುವತಿಯಾಗಿರುವ ಕರ್ನಾಟಕದಲ್ಲಿಯ ಹಲವು ಪ್ರದೇಶಗಳನ್ನು ಸಂದರ್ಶಿಸಿದೆನು. ಅಗಾಧವಾದ ಇಲ್ಲಿಯ ಶಿಲ್ಪಚಾತುರ್ಯವನ್ನು ಮೆಚ್ಚಿದೆನು. ವರುವರುಷವೂ ತಿರುಗಾಡುವ ಹುಚ್ಚು ತಲೆಗೇರಲು ಸಕಲ ದೇಶಗಳನ್ನೂ ಸುತ್ತಿ ಅಲ್ಲಿಯಷ್ಟು ರಮ್ಯವಲ್ಲದ ಪುರವನಗಳನ್ನು ನೋಡಿ ನೋಡಿ ಬೇಸತ್ತು ಸಂಚಾರಕ್ರಮವನ್ನು ನಿಲ್ಲಿಸಿದೆನು. ಬಹುದಿನಗಳಮೇಲೆ ನಾನು ಬರುವಾಗ ನಮ್ಮವನ ವ್ಯವಸಾಯಜ್ಞಾನದ ಫಲವಾಗಿ ಕೃಷಿಕಾರ್ಯವು ಉತ್ತಮೋತ್ತಮವಾಗಿ ಸಾಗಿತ್ತು. ಬೆಳೆದ ಹೊಲದ ಬದಿಯಲ್ಲಿ ಒಕ್ಕಲಿಗರೂ, ಅವರ ಹೆಂಡಿರುಮಕ್ಕಳೂ ಗುಂಪುಗುಂಪಾಗಿ ನನ್ನನ್ನು ಬರಮಾಡಿಕೊಂಡರು. ಅದರಿಂದ ನನ್ನ ಆನಂದವಿಮ್ಮಡಿಸಿತು. ಓಹೋ! ಇದೇನು ತಿರುಕನ ಕನಸು!! ನಿಮಗಿನ್ನು ಬೇಜಾರವಾದೀತು. ಸಂಕ್ಷಿಪ್ತವಾಗುಸುರುವೆನು."

ಅವನು ಕ್ಷಣಕಾಲ ಸುಮ್ಮನಾದನು. ವೀರಪ್ಪನಿಗೆ ಬಿಕ್ಕಿ ಅಳುವ ಧ್ವನಿಯು ಕೇಳಿಸಿತು. ಪುನಃ ಮೃತ್ಯುಂಜಯನು ಮಾತನಾಡಲುಪಕ್ರಮಿಸಿದನು:

"ನನಗಿಪ್ಪತ್ತಾರು ವರುಷಗಳಾದಾಗ ಸಹಜವಾಗಿ ಲಗ್ನದ ಅಭಿಲಾಷೆಯು ಅಂಕುರಿಸಿತು. ಅದೃಷ್ಟವಶದಿಂದ ಅಪ್ರತಿಮಯುವತಿಯೊಬ್ಬಳ ಪರಿಚಯವಾಯಿತು. ಕ್ರಮೇಣ ಪರಿಚಯವು ಸ್ನೇಹವಾಗಿಯೂ, ಸ್ನೇಹವು ಪ್ರೇಮವಾಗಿಯೂ ವೃದ್ಧಿಂಗತವಾಗಲು ನಾನು ಅತಿ ಮೈಮರೆತು

ಅವಳ ದಾಸಾನುದಾಸನಾದೆನು. ಅವಳ ಮಾತನ್ನು ಕೇಳಿ ಮೈಮರೆಯುತ್ತಿದ್ದೆನು; ಅವಳಂಗಚಲನದಿಂದ ಭ್ರಮಿಸುತ್ತಿದ್ದೆನು; ಕಣ್ಣೋಟದಿಂದ ಕಳವಳಿಸುತ್ತಿದ್ದೆನು. ಹದಿನೆಂಟು ವರುಷದ ಏರುಜವ್ವನದ ಅತ್ಯುತ್ಸುಕ ಮನಃಸ್ಥಿತಿಯು ಆಗ ನನಗಿತ್ತು. ಇದನ್ನು ಅವಳ ಒಬ್ಬಳೇ ಬಂಧುವಾದ ಅವಳ ಮಾತೆಯರಿತು ತನ್ನ ಮಗಳ ಸುಭವಿಷ್ಯಕಲ್ಪನೆಯಿಂದ ಸಂತುಷ್ಟಳಾಗಿದ್ದಳು. ನನ್ನ ಪ್ರೇಮಕ್ಕಿಂತಲೂ ನೂರ್ಮಡಿಯಾದ ಪ್ರೇಮವನ್ನು ಸರಸೆಯು ಆಗಾಗ್ಗೆ ಪ್ರಕಟಪಡಿಸುತ್ತಿದ್ದಳು. ಅಲ್ಪಾವಧಿಯಲ್ಲಿಯೇ ನಮ್ಮ ವಿವಾಹವಾದನಂತರ ಎಲ್ಲರೂ ವಿಜಯಪುರಕ್ಕೆ ಮೂರು ಮೈಲು ದೂರದಲ್ಲಿರುವ ನಮ್ಮ ನಿವಾಸಕ್ಕೆ ಬಂದೆವು. "ಬೆಚ್ಚನ್ನ ಮನೆಯಾಗೆ ವೆಚ್ಚಕ್ಕೆ ರೊಕ್ಕಾಗೆ। ಇಚ್ಚೆಗೇ ಬರುವ ಸತಿಯಿರಲು ಸಗ್ಗಕ್ಕೆ। ಕಿಚ್ಚು ಹಚ್ಚೆಂದ ಸರ್ವಜ್ಞ" ಎಂಬಂತೆ ನಾವು ಸೌಖ್ಯದ ಶಿಖರವನ್ನೇರಿದ್ದೆವು. ಹೀಗೆ ಕೆಲ ವರುಷಗಳು ಕಳೆದರೂ ನಮಗೆ ಸಂತಾನಲಾಭವು ದೊರೆಯಲಿಲ್ಲ. ಆದರೂ ಸರಸೆಯ ಸರಸವರ್ತನದಿಂದ ನನಗದು ವಿರಸವೆನಿಸಲಿಲ್ಲ. ಮುಂದೆ ನಮ್ಮತ್ತೆಯು ಸ್ವರ್ಗಸ್ಥಳಾದಳು. ನನ್ನರಸಿಗಾದ ಶೋಕವನ್ನು ಹೋಗಲಾಡಿಸಲು ಅವಳೊಡನೆ ನಾನು ಕೆಲದಿನಗಳ ಮಟ್ಟಿಗೆ ಊರು ಬಿಟ್ಟು ಹೋಗಬೇಕಾಯಿತು."

ಮೃತ್ಯುಂಜಯನು ಪುನಃ ಸ್ವಲ್ಪ ಸುಮ್ಮನಾಗಿ, ಒಮ್ಮೆ ಉಸಿರ್ಗರೆದು ತನ್ನ ಮಾತನ್ನು ಮುಂದರಿಸಿದನು:

"ಕೆಲ ವಾರಗಳನಂತರ ನಾವು ಹಿಂದಿರಿಗಿ ಬಂದ ಮೇಲೆ ಯಾವನ ಜ್ಞಾಪಕಮಾತ್ರದಿಂದ ನನ್ನಲ್ಲಿ ಸೇಡುರೋಷಗಳ

ಅತಿರೇಕವಾಗಿ ನಾನು ಮೈಮರೆಯುವಂತಾಗುವುದೋ ಆ ಹೊಲೆಯನ ಪರಿಚಯವು ನನಗಾಯಿತು. ಆ ೨೪-೨೫ ವರ್ಷಗಳ ವಿಲಾಸೀ ತರುಣನು ನಮ್ಮ ಮನೆಗೆ ಮೇಲಿಂದಮೇಲೆ ಬರುವ ಪರಿಪಾಠವಿಟ್ಟಿದ್ದನು. ಈ ದುರ್ಜಯನಲ್ಲಿ ಒಂದು ಆಕರ್ಷಕ ಶಕ್ತಿಯಿದ್ದುದರಿಂದ ನಾನು ಹೇಗೋ ಅವನಲ್ಲಿ ಪೂರ್ಣ ವಿಶ್ವಾಸವುಳ್ಳವನಾದೆನು. ವಯಸ್ಸಿನಿಂದ ಹೆಚ್ಚು ಹಿರಿಯನಾದ ನಾಗಶೆಟ್ಟಿಯು ನಮ್ಮೆಲ್ಲ ಹಿರಿಯರ ಮೈತ್ರಿಯನ್ನು ಸಂಪಾದಿಸಿದ್ದನಾದುದರಿಂದ ನಾನೂ ಅವನನ್ನು ನಮ್ಮವರಲ್ಲೊಬ್ಬನೆಂದು ಎಣಿಸಿದೆನು. ಇಂಥವರಿಬ್ಬರೂ ಪಾಲುಗಾರರಾಗಿ ಬಡ ರೈತರ ಕಾಮಧೇನುವಾಗುವಂತಹ ಬ್ಯಾಂಕನ್ನು ತೆಗೆಯುವುದಾಗಿಯೂ, ದುಡ್ಡಿನಡಚಣಿಯ ಮೂಲಕ ಕಾಳುಕಡಿಗಳನ್ನು ಅಯೋಗ್ಯವಾದ ಕೀಳು ಬೆಲೆಗಿತ್ತು ಕಷ್ಟಪಡುವ ಒಕ್ಕಲಿಗರಿಗೆ ಉದಾರವಾದ ಸಾಲವನ್ನೊದಗಿಸುವುದಾಗಿಯೂ, ನನಗೆ ತಿಳಿಮುಬರಲು ನನಗತ್ಯಾನಂದವೂ ಅವರಲ್ಲಿ ಅಭಿಮಾನವೂ ಉಂಟಾದುವು. ಅವರನೇಕ ವೇಳೆ ಮೂಲಧನವು ಸಾಲುವಂತಿಲ್ಲವೆಂದು ಸೂಚಿಸಲು ಅವರ ಮಹತ್ಕಾರ್ಯವು ಇಂತಹದೊಂದು ಚಿಕ್ಕ ಅಡಚಣಿಯಿಂದ ಕೈಗೂಡದಂತಾಗದಂತೆ ನಾನು ಮಾಡುವುದಾಗಿ ಭರವಸೆಯಿತ್ತೆನು. ಇದರಲ್ಲಿ ನಾನು ಪಾಲುಗಾರನಾದುದು ಲಾಭದ ಆಶೆಯಿಂದಲ್ಲವೇ ಅಲ್ಲ-ಏಕೆಂದರೆ ನನ್ನಲ್ಲಿ ಸ್ವಾರ್ಥಪರತೆಯುಂಟಾಗದಷ್ಟು ಐಶ್ವರ್ಯವು ನೆಲೆಸಿತ್ತು. ಆದರೆ ಆ ಅತಿಪಾತ್ರ ವರ್ಗಕ್ಕೆ ಉಪಕಾರಿಯಾಗುವ ಉದ್ದೇಶದಿಂದ. ಇದರಿಂದ ನಮ್ಮ ಮೈತ್ರಿಯು-ಅದರಲ್ಲಿಯೂ ದುರ್ಜಯನ ಸ್ನೇಹವು-ಹೆಚ್ಚು ಬೇರೂರಿತು. ಅವನು ಒಂದು ದಿನವಾದರೂ ನಮ್ಮ

ಲ್ಲಿಗೆ ಬಂದು ಹೋಗದಿರುತ್ತಿರಲಿಲ್ಲ. ನಾನು ಇವರಲ್ಲೊಬ್ಬ ಪಾಲುಗಾರನಾದ ಕೆಲ ಕಾಲಾನಂತರ ಬೇರೂರಿನಲ್ಲಿದ್ದ ನಮ್ಮ ಬಂಧುವೊಬ್ಬನಿಗೆ ಬೇನೆಯಾಗಲು ನಾನಲ್ಲಿಗೆ ಹೋಗಬೇಕಾಯಿತು. ಸರಸೆಗಾಗ ದೇಹಾಲಸ್ಯವಿದ್ದುದರಿಂದ ಅವಳು ನನ್ನನ್ನು ಅನುಸರಿಸಲಿಲ್ಲ. ಇಂದು ನಾಳೆಯೆನ್ನುತ್ತಾ ಕೆಲವಾರಗಳು ಕಳೆದಮೇಲೆ–ಮುಂದೆರಡು ತಿಂಗಳಮೇಲೆ–ನಾನು ಹಿಂದಿರುಗಲು ಅವಳೆಷ್ಟೋ ಸಂತೋಷಭರಿತಳಾದಳೆಂದು ನನಗಂದು ತೋರಿದರೂ ಅದು ರಾಕ್ಷಸೀ ನಟನೆಯೆಂದೀಗ ಮನವರಿಕೆಯಾಗಿದೆ. ಅಯ್ಯೋ ನಾನೆಂಥಾ ಮೂರ್ಖನು? ಅದೆಂಥಾ ಕುರುಡನು? ಏಕೆಂದರೆ, ನಾನಿಲ್ಲದಿರುವಾಗ ದುರ್ಜಯನು ಎಂದಿನಂತೆ ದಿನದಿನವೂ ಬಂದು ನನ್ನ ಬರುವಿಕೆಯನ್ನು ವಿಚಾರಿಸಿ ಸರಸೆಯ ಕುಶಲವಾರ್ತೆಯನ್ನು ಕೇಳುತ್ತಿದ್ದನೆಂದು ನಾನರಿತು ಅವನನ್ನು ಆ ದಿನ ಕೊಂಡಾಡಿದೆನು. ಆಗ ನನ್ನ ಭ್ರಾತೃವಿನಂತಿದ್ದ ಅವನು ಮನೆಗೆ ಬಂದರೇನೂ ಎನಿಸುತ್ತಿರಲಿಲ್ಲ. ಇತ್ತೀಚೆಗೆ ಸರಸೆಯು ವಸ್ತ್ರಾಲಂಕಾರಗಳಲ್ಲಿ ಅತಿವ್ಯಯಮಾಡುತ್ತಿದ್ದುದು ಸರಿಯಲ್ಲನೆಂದು ನನಗೆ ತೋರಿದರೂ ಅವಳಲ್ಲಿನ ಅತಿ ಅನುರಾಗವು ನನಗವನ್ನು ಅನ್ನಗೊಡಲಿಲ್ಲ. ನಮ್ಮ ಬ್ಯಾಂಕು ಅತ್ಯುತ್ತಮ ರೀತಿಯಿಂದ ವೃದ್ಧಿಹೊಂದುತ್ತಿರುವುದೆಂದು ದುರ್ಜಯನೂ ನಾಗಶೆಟ್ಟಿಯೂ ಆಗಾಗ ಹೇಳುತ್ತಿದ್ದರು. ಅವರ ಮಾತಿನಲ್ಲಿ ಪೂರ್ಣ ನಂಬಿಗೆಯುಳ್ಳ, ಹಾಗೂ ಅಲ್ಲಿಯ ವ್ಯವಹಾರದಲ್ಲಿ ಕೈಹಾಕದ, ನಾನು ಎಲ್ಲವನ್ನೂ ನಂಬಿದೆನು. ಅವರ ದುಂದುಗಾರಿಕೆಯಿಂದ ಅವರ ಮಾತು ಸತ್ಯವೆಂಬಂತೆ ನನಗೆ ತೋರಿತು. ಆದರೆ ಮುಂದೊಂದು ದಾವಾಗ್ನಿಯೆದ್ದಿತು. ”

ಪುನಃ ಮೃತ್ಯುಂಜಯನು ಸ್ವಲ್ಪ ತಡೆದನು. ಮುಂದಿನ ಕಥೆಯಿಂದ ಇವನ ಮೇಲಿನ ಭಯಂಕರ ಅಪರಾಧಗಳು ಅವ ರಿಬ್ಬರ ಮೇಲೆ ತಿರುಗಬಹುದೇನೆಂದು ಅತಿ ಉತ್ಕಂಠಿತನಾಗಿ ವೀರಪ್ಪನು ಉಸಿರಾಡದಂತಿದ್ದನು.

ಮೃತ್ಯುಂಜಯನು ಮಾತನಾಡಲುಪಕ್ರಮಿಸಿದನು.

"ಪ್ರಳಯವಾದುದು ಹೋದ ಸೋಮವಾರ. ಲೇಶಾಂಶ ವಾದರೂ ಸೂಚನೆಯಿಲ್ಲದೆ ಪ್ರಶಾಂತತೆಯ ಗರ್ಭವನ್ನು ನಿರ್ಭೇದಿಸಿ ಬರುವ ಬಿರುಗಾಳಿಯು ಅದೆಷ್ಟು ಭಯಂಕರವಾದುದು !! ಆ ದಿನ ಬೆಳಗಿನಲ್ಲಿ ನಾನು ಉದ್ಯಾನದಲ್ಲಿದ್ದಾಗಡು ವಾಗ ಸರಸೆಯು ಅವಸರದಿಂದ ಬಂದು ನನ್ನನ್ನೊಮ್ಮೆ ಚುಂಬಿಸಿ ನೆರೆಮನೆಯ ನಾಗವೇಣಿಗಿರುವಂಥಾ ಪತ್ತಲವು ತನಗೂ ಬೇಕೆಂದೂ ಅದು ವಿಜಯಪುರದಲ್ಲಿ ದೊರೆಯುವು ದೆಂದು ದುರ್ಜಯನು ತಿಳಿಸಿರುವನೆಂದೂ ಹೇಳಲು, ಹಿಂದೆಂದೂ ಅಷ್ಟು ಸುಂದರಳಾಗಿ ಕಂಡುಬರದ ಸರಸೆಗ ಧೀನನಾಗಿ ನಾನೊಡನೆಯೇ ವಿಜಯಪುರಕ್ಕೆಂದು ಹೊರ ಟೆನು. ಕುಹಕರಾದ ಕೋಮಲೆಯರೇ, ನೀವು ಅತ್ಯಂತ ಕಪಟಿಗಳಾದಾಗ ಪ್ರೇಮಾಮೃತವನ್ನು ಉಕ್ಕೇರಿಸಬಲ್ಲಿ ರಲ್ಲವೇ!! ಎಂದೂ ಇಲ್ಲದ ಸೌಂದರ್ಯವಂದು ನಿಮ್ಮಲ್ಲಿರುವು ದಲ್ಲವೇ?"

ಹೃದಯವನ್ನಿರಿಯುವ ದುಃಖಾತಿರೇಕದಿಂದವನು ಕೈಗಳ ನ್ನೊತ್ತಿ ಹಿಸುಕಿ ಹಲ್ಲುಕಟೆದುದು ವೀರಪ್ಪನಿಗೆ ಕೇಳಿಸಿತು.

"ಸಂಶಯರಹಿತನಾದ ನಾನು ಸರಸೆಯ ಅಪೇಕ್ಷೆಯ ನ್ನೀಡೇರಿಸಲು ನನ್ನ ಸೇವಕನೊಡನೆ ವಿಜಯಪುರಕ್ಕೆ ನಡೆ ದೆನು. ಅಲ್ಲಿ ನಮ್ಮ ಬ್ಯಾಂಕಿಗೆ ಹೋಗಿ ಹೊಸ ಚಕ್ಕುಗಳ

ಪುಸ್ತಕವೊಂದನ್ನು ತೆಗೆದುಕೊಂಡು ಅಲ್ಲಿದ್ದ ದುರ್ಜಯನೊಡನೆ ಮಾತನಾಡುವಾಗ ನಾಗಶೆಟ್ಟಿಯು ಹಿಂದಿನ ರಾತ್ರಿಯಲ್ಲಿಯೇ ಒಂದು ಅವಸರದ ಕೆಲಸದ ನಿಮಿತ್ತವಾಗಿ ವಿಜಯನಗರಕ್ಕೆ ಹೋಗಿರುವನೆಂದು ತಿಳಿಯಬಂದಿತು. ಅವನನ್ನು ಕಂಡೊಡನೆಯೇ ಅವನು ಅತಿ ಸಪ್ಪಗಾಗಿರುವಂತೆಯೂ ಭ್ರಾಂತಿಯುಕ್ತನಾದಂತೆಯೂ ಹೊಳೆಯಿತು. ಇದು ವಿಪರೀತವಾದ ಬ್ಯಾಂಕಿನ ಕೆಲಸದ ಪರಿಣಾಮವೆಂದು ತರ್ಕಿಸಿ ನಾನು ಹೊರಟುಹೋದೆನು. ಅಂಗಡಿಯಲ್ಲಿ ಬಹು ಬೆಲೆ ಬಾಳುವ ಪತ್ತಲವೊಂದನ್ನು ತೆಗೆದುಕೊಂಡು ನಮ್ಮ ಬ್ಯಾಂಕಿನ ಮೇಲೊಂದು ಚೆಕ್ಕನ್ನು ಬರೆದುಕೊಟ್ಟನಂತರ ನಮ್ಮಾಳನ್ನು ಕಾದಿರಹೇಳಿದಲ್ಲಿಗೆಂದು ಹೊರಡುವಷ್ಟರಲ್ಲಿ ಚಿನ್ನದ ಗಡಿಯಾರದ ಸರಪಣಿಯು ಹರಿದಿತು. ಅದು ಬಹಳ ದಿನಗಳಿಂದಲೂ ನನ್ನಲ್ಲಿದ್ದು ಪೆನ್ಶನ್‌ಗೆ ಬಂದ ಗಡಿಯಾರವಾದುದರಿಂದ ಹೊಸದೊಂದನ್ನು ಕೊಂಡುಕೊಳ್ಳಲು ಸಮೀಪದಲ್ಲಿದ್ದೊಂದು ಚಿನಿವಾಲರ ಅಂಗಡಿಗೆ ಹೋದೆನು. ಸಾಧಾರಣವಾಗಿ ನಾವು ಗುರುತಿನಂಗಡಿಯವರಿಗೆಲ್ಲಾ ದಿನದಿನವೂ ಹಣವನ್ನು ಹೊತ್ತುಕೊಂಡು ಹೋಗಿ ಕೊಡುವ ಬದಲು ಚೆಕ್ಕುಗಳನ್ನೇ ಕೊಡುವ ಪರಿಪಾಠವಿದ್ದುದರಿಂದ ಅವನಿಗೂ ಒಂದು ಚೆಕ್ಕೇ ದೊರೆಯಿತು. ಈ ಸಲ ಅವನೇಕೋ ಹಿಂದೆ ಮುಂದೆ ನೋಡಿದರೂ ತನ್ನ ಮನೋಗತವನ್ನು ನನ್ನ ಮುಂದೆ ಪ್ರಕಾಶಪಡಿಸಲು ಅವನು ಬೆದರಿದನು. ನಾನು ಬಹು ಪ್ರಯತ್ನಪಟ್ಟಮೇಲೆ—ಹತ್ತುಸಾವಿರ ಸಾರೆ ಕ್ಷಮಾಪಣೆಯನ್ನು ಕೇಳಿ-ಕ್ಷುದ್ರವಿಷಯವೊಂದನ್ನು ತಮ್ಮಂಥವರ ಮುಂದೆ ಹೇಳಿದೆನೆಂದು ತಪ್ಪಭಿಪ್ರಾಯವನ್ನು ತಾಳಬೇಡಿರೆಂದು

ಜೇಡಿ-ಬಾಯೀಸಾಹೇಬರಂಥಾ ಗಿರಾಕಿಯನ್ನು ಕಳಕೊಳ್ಳುವ ದುರ್ಭಾಗ್ಯವು ತನಗುಂಟಾಗದಂತೆ ನೋಡಿಕೊಳ್ಳಬೇಕೆಂದು ಪ್ರಾರ್ಥಿಸಿ—ತಾನೀಗ ಹೊರಗೆ ಕೊಡತಕ್ಕುದು ವಿಪರೀತವಾಗಿರುವುದರಿಂದ ಈ ಮೂರು ವರ್ಷಗಳಿಂದಲೂ ನಡೆದು ಬಂದ ಬಾಕಿಯನ್ನು ಪೂರ್ಣವಾಗಿ ಕೊಟ್ಟರೆ ತಾನು ಅತಿ ಋಣಿಯಾಗಿರುವೆನೆಂದು ಅವನು ಅಂಗಲಾಚಿದನು. ನನಗತ್ಯಾಶ್ಚರ್ಯವಾಯಿತು! ಹುಚ್ಚು ಹಿಡಿಯಿತು!! ತನಗೇನು ಬೇಕಾದರೂ ನನ್ನಿಂದಲೇ ಅವಳು ತರಿಸಿಕೊಳ್ಳುತ್ತಿರುವಾಗ, ಇದು ಹೇಗೆ ಸಾಧ್ಯ!!! ಅದೂ ಎಂತಹ ಬಾಕಿ--೧೦೦೦೦ ರೂ.ಗಳು!! ನಾನು ಆತ್ಮಬಲದಿಂದ ನನ್ನ ಭಾವನೆಗಳನ್ನೆಂತೋ ಬಚ್ಚಿಟ್ಟು ಸರಸಿಯು ನನ್ನನ್ನು ಮೋಸಗೊಳಿಸಿದಳೆಂಬುದು ಇತರರಿಗೆ ತಿಳಿಯದಂತಿದ್ದೆನು. ಲೆಕ್ಕವನ್ನು ನೋಡಿನೋಡಿದಂತೆ ಅವಳು ೧೦ ೨೦ ರೂ. ಗಳೆಂದು ನನಗೆ ತೋರಿಸಿದುವುಗಳ ಬೆಲೆಯು ೫೦೦-೧೦೦೦ ರೂ. ಗಳಾಗಿತ್ತು !! ಇದರಂತೆಯೇ ಎಲ್ಲ ಒಡವೆಗಳದು. ಆದರೂ ನಾನು ಹೇಗೋ ತಡೆದುಕೊಂಡು ಸಾಲವೆಲ್ಲವೂ ತೀರುವಂತೆ ಚಕ್ಕನ್ನು ಬರಕೊಟ್ಟು ಅಲ್ಲಿಂದೆದ್ದೆನು. ಪೇಟೆಯಲ್ಲಿ ಪತ್ತಲದವನು ಸಂಧಿಸಿದನು. ಅವನ ಕಪ್ಪಾದ ಮುಖವನ್ನು ನೋಡಿದೊಡನೆಯೇ ನಾನೇಕೋ ಬೆದರಿದೆನು. ನನ್ನ ಚಕ್ಕು ಬ್ಯಾಂಕಿನಲ್ಲಿ ಅವಮಾನಿತವಾಯಿತೆಂದು ಅವನು ಒಮ್ಮಿಂದೊಮ್ಮೆ ನುಡಿದೊಡನೆ ನನ್ನೆದೆಯೊಡೆದು ನಾಲಿಗೆಯೊಣಗಿತು. ಬ್ಯಾಂಕಿನವರದೇನೋ ತಪ್ಪಿನ ಫಲವಿದೆಂದೂ ನಾನು ಬರುವವರೆಗೂ ಅಂಗಡಿಯಲ್ಲಿ ದಾರಿಯನ್ನು ಕಾಯುತ್ತಿರಬೇಕೆಂದೂ ಅವನಿಗರುಹಿ ನಾನಲ್ಲಿಗೆ ಹೋದೆನು. ಅಲ್ಲಿ ದುರ್ಜಯನಿರಲಿಲ್ಲ. ಇನ್ನಿತ

ರರು ಬ್ಯಾಂಕಿನ ಹಳೆಗಾಲವಾರಂಭಿಸಿ ಬಹುದಿನಗಳಾದುವೆನ್ನಲು ಲೆಕ್ಕಪತ್ರಗಳಲ್ಲಿ ನಾನು ಪ್ರವೀಣನಲ್ಲದಿದ್ದರೂ ಅಲ್ಲಿದ್ದ ಪುಸ್ತಕಗಳನ್ನು ತಿರುವಿ ನೋಡಲಾರಂಭಿಸಿದೆನು. ಕಟ್ಟಕೊನೆಯಲ್ಲಿ ದಿವಾಳಿಯಾಗಿರುವುದು ನಿಜವೆಂದು ತೋರಿಬರಲು ನನ್ನೆದೆಯೊಡೆದು, ತಲೆತಿರುಗಿ ಬಹು ಕಳವಳಿಸಿದೆನು. ಬಹಳ ಹೊತ್ತಿನವರೆಗೂ ದಾರಿಯನ್ನು ನೋಡಿದರೂ ದುರ್ಗಯನು ಬರಲಿಲ್ಲ. ಆಗಾಗಲೇ ಸಾಯಂಕಾಲ ಐದು ಗಂಟೆಯಾದುದರಿಂದ ನಾನಲ್ಲಿಂದ ಹೊರಬಿದ್ದೆನು. ಸರಸಿಯ ನಡಾವಳಿಯಿಂದ ನೋಯಿಸಲ್ಪಟ್ಟ ನನಗೆ ಮನೆಗೆ ಹೋಗುವ ಮನಸ್ಸಾಗದಿರಲು ಅಲ್ಲಿನದೊಂದು ಊಟದ ಮನೆಯನ್ನು ಪ್ರವೇಶಿಸಿ ನನ್ನ ಪಾಲಿಗೆ ರುಚಿಕರವಲ್ಲದೂಟವನ್ನು ಮುಗಿಸಿ, ಒಂದೆರಡು ತಾಸುಗಳವರೆಗೆ ವಿಶ್ರಮಿಸಿಕೊಳ್ಳುತ್ತಿರಲು ಒಂಬತ್ತು ಹೊಡೆಯಿತು. ”

ಪುನಃ ನಿಶ್ಶಬ್ದವಾಯಿತು. ವೀರಪ್ಪನು ಕೌತುಕಸ್ವಾರಸ್ಯಗಳಿಂದ ಕಂಗೆಟ್ಟಿದ್ದರೂ 'ಚ'ಕಾರವನ್ನು ಸಹ ನುಡಿಯುವಂತಿದ್ದನು.

“ವೀರಪ್ಪಾ, ನನ್ನಲ್ಲಿ ತಡೆದುಕೊಳ್ಳುವ ಶಕ್ತಿಯಿತ್ತು— ನನ್ನ ಆ ಪಾಲುಗಾರರ ಮೋಸದ ಇರಿಯುವಿಕೆಯನ್ನು ಸಹಿಸುವ ಶಕ್ತಿಯು ನನ್ನಲ್ಲಿತ್ತು. ನನ್ನ ಪತ್ನಿಯ ವಿಷಯದಲ್ಲಿನ ಎದೆಯೊಡೆಯಿಸುವ ಶೋಧವಾಗದಿದ್ದರೆ ಇನ್ನೆಲ್ಲವನ್ನೂ ತಡೆದುಕೊಳ್ಳಬಲ್ಲವನಾಗಿದ್ದೆ!! ಅವಳ ನಡತೆಯಲ್ಲಿನ ಸಾವಿರಾರು ಚಿಕ್ಕ ಪ್ರಸಂಗಗಳು ಒಂದಾನೊಂದು ಸಂಶಯಾಭಾಸದಿಂದ ನನ್ನ ಮುಂದೆ ಬಂದು ನಿಂತುವು. ಆ ಸಂಶಯವು ಬಲವತ್ತರವಾಗಿ ವಿರಾಡ್ರೂಪವನ್ನು ಧರಿಸಿ ನನ್ನ ಪತ್ನಿಯು

ಅವಿಧೇಯಳೆಂದು ಮನಗಾಣಿಸಿತು. ಆ ನೀಚ ದುರ್ಜಯನು ಈ ಸರ್ಪಿಣಿಯ ಮಿಂಡನು!! ಅಯ್ಯೋ, ನನ್ನ ಕುಸುಮಸ್ವಪ್ನವೆಲ್ಲ ಜ್ವಾಲಾಮುಖಿಯೊಂದು ಧಗಿಲೆಂದೆದ್ದಿತು!!! ನನ್ನಕ್ಷಿ ಸ್ಥಿರತೆಯು ಉಳಿಯುವಂತಾಗಲು ಕೂಡಲೆ ಗೋಡೆಗೊರಗಿದೆನು. ಇದರಿಂದ ನನ್ನ ಪಾಲುಗಾರರ ಧೀಮಣತೆಯು ಅರಿವಾಗಿ ನನ್ನ ಮನೋವೇದನೆಯು ಹೆಚ್ಚಾಯಿತು. ಮಗ್ಗುಲಿನ ಕೋಣೆಯಲ್ಲಿ ನಾಗಲಕ್ಷ್ಮಿಯು ದುರ್ಜಯನ ಮುಂದೆ ತಾನಂತು ನನ್ನ ಹೆಸರಿನಲ್ಲಿ ಅನೇಕ ವ್ಯಾಪಾರಗಳನ್ನು ಮಾಡುವೆನೆಂದೂ ತಾನು ಮಾಡಿದ ಕಾರ್ಯಕ್ಕೆ ಬರೆಹಗಳನ್ನು ಸರಕಾರವಲ್ಲೆಲ್ಲಿಯೂ ಅನುಮಾನಿಸಲಿಲ್ಲವೆಂದೂ ಇಂತಹ ಮಹಾವ್ಯಾಪಾರವೊಂದನ್ನೀಗ ವಿಜಯನಗರದಲ್ಲಿ ಜರುಗಿಸುವನೆಂದೂ ಮರುಹಿಸಿಂದ ಹೇಳುತ್ತಿರಲು ದುರ್ಜಯನು ಬಹು ಹರ್ಷಿತನಾದನು. ನಾನು ನಿಂತಲ್ಲಿಯೇ ಕಲ್ಲಾಗಿಬಿಟ್ಟೆನು. ನಾವು ವಿಜಯಪುರಕ್ಕೆ ಹೋಗುವುದು ಗೊತ್ತಿದ್ದರೂ ತಾನು ಈ ಪತ್ರವನ್ನು ನಮ್ಮ ಮನೆಗೆಂತು ಹೋದವನೆಂದೂ, ಸುಂದರಿಯಾದ [illegible]ರಸಿಗೆ ಬ್ಯಾಂಕು ದಿವಾಳಿಯಾದ ಸುದ್ದಿಯನ್ನೆಂತು ತಿಳಿಸಿದೆನೆಂದೂ, ತಾನೂ ನಾಗಲಕ್ಷ್ಮಿಯೂ ತಮ್ಮ ಸುರಕ್ಷಿತತೆಯನ್ನೆಂತು ಸಾಧಿಸಿಕೊಂಡಿರುವೆವೆಂದೂ, ಅವಳ ಗಂಡನಾದ ನನ್ನ ಕಾಟವನು ತಪ್ಪಿಸಿಕೊಳ್ಳುವ ಮಾರ್ಗವು ನಿಶ್ಚಯಿಸಲ್ಪಟ್ಟಿರುವುದೆಂದೂ, ಅವಳು ಸ್ವಲ್ಪ ಅನುಮಾನಿಸಿದರೂ ಕೊನೆಯಲ್ಲಿ ಅದನ್ನೊಪ್ಪಿರುವಳೆಂದೂ ಮಹಾರಾಕ್ಷಸನಾದ ದುರ್ಜಯನುಸುರಿದನು. ಆ ಮಾರ್ಗವಾವುದೆಂದು ನನಗೆ ಗೊತ್ತಾಗದಿದ್ದರೂ ನಾಗಲಕ್ಷ್ಮಿಯು ವಿಜಯನಗರದಲ್ಲಿಯೇ ಎಲ್ಲ ವ್ಯವಸ್ಥೆಯನ್ನು

ಮಾಡಿರುವನೆಂದು ತಿಳಿಯಿತು. ಘಾತಕಿಗಳು! ಅವರು ನನ್ನನ್ನು ಕೊಲೆಮಾಡಬೇಕೆಂದಿದ್ದರೋ? ನನ್ನ ರಕ್ತನಾಳಗಳಲ್ಲಿ ಕಾದ ಕಬ್ಬಿಣದ ರಸವು ಹರಿದಂತಾಯಿತು. ಈ ಕೆಲಸವನ್ನು ಕೈಗೂಡಿಸಲು ವಿಜಯನಗರದಲ್ಲಿನ ಪ್ರತಾಪರುದ್ರನೆಂಬುವನು ವಿಪರೀತವಾಗಿ ಲಂಚವನ್ನು ತೆಗೆದುಕೊಂಡು ಒಪ್ಪಿಕೊಂಡನಂತೆ! ಒಂದೊಮ್ಮೆ ಪೋಲೀಸಾಮ್ರಾಜ್ಯಗಳ ವ್ಯವಹಾರದಲ್ಲಿವನು ಎಷ್ಟು ದಕ್ಷತೆಯಿಂದ ನಡೆಸಿಕೊಂಡನೆಂದಿಬ್ಬರೂ ಅವನನ್ನು ಕೊಂಡಾಡಿದರು!! ನಾನಂತು ದೀರ್ಘಕಾಲದವರೆಗೂ ಅಲುಗಾಡದೆ ಉಸಿರಾಡದೆ ಏಕಾಗ್ರಚಿತ್ತದಿಂದ ನಿಂತಿದ್ದೆನೋ ನಾನರಿಯೆ. ಕೊನೆಯಲ್ಲಿ ಆ ಸರಸಿಯ ಪ್ರಿಯನು-ದುಷ್ಟ ದುರ್ಜಯನು—ಅತಿ ಕೀಳುನುಡಿಯಲ್ಲಿ, ಶೃಂಗಾರದ ಮಾತಿನಲ್ಲಿ, ಹೋಳೀಪದಗಳ ನುಡಿಯಲ್ಲಿ ನನ್ನ ಪತ್ನಿಯ ವಿಷಯವನ್ನಾಡುತ್ತಿರಲು ನನ್ನನ್ನು ಲಾವಾರಸದಲ್ಲದ್ದಿದಂತಾಗಲು, ಆ ನೀಚರಿಬ್ಬರನ್ನೊದೆಯಬೇಕೆಂದು ಸಿಡಿದೆದ್ದೆನು. ಆದರೆ ಸ್ಮೃತಿತಪ್ಪಿದಂತಾಗಿ ಕೆಳಕ್ಕುರುಳಿದೆನು."

ಮೃತ್ಯುಂಜಯನು ಪುನಃ ನುಡಿಹೀನನಾದನು. ತಡೆಯಲಾರದೆ ದುಃಖೋದ್ಗಾರಗಳು ಹೊರಬಿದ್ದುವು. "ಪರಮಾತ್ಮಾ, ನನ್ನನ್ನು ಹೊರಗಟ್ಟು! ನಾನು ಆ ಪಾಷಂಡಿಗಳನ್ನು ಬೇಟೆಯಾಡಿ ನಮ್ಮ ಪೋಲೀಸ ಬಂಧುಗಳ ಕೈವಶ ಮಾಡದೆ ಬಿಡುವುದಿಲ್ಲ."

"ಮೃತ್ಯುಂಜಯರಾಯರೇ ನೀವು ಮೊದಲು ಮುಂದರಿಸಿರಿ, ನಾನು ಕೌತುಕಾತಿರೇಕದಿಂದ ಸಾಯುತ್ತಿದ್ದೇನೆ" ಎಂದು ವೀರಪ್ಪನೊದರಿದನು.

"ಮುಂದಿನದು ಭಯಂಕರ ಕಥೆ. ನಾನು ಮುಂದರ್ಧ

ತಾಸಿನ ಮೇಲೆ ಮೇಲಕ್ಕೆದ್ದಾಗ ಮಗ್ಗುಲಿನ ಕೋಣೆ ಯಿಂದಾವ ಧ್ವನಿಯೂ ಕೇಳಿಬರಲಿಲ್ಲ. ಅವರೆಮ್ಬ ಹೋಗಿ ದ್ದರು. ನಾನು ಮನೆಗೆ ಹೋಗಿ ಪತ್ನಿಯಮೇಲಿನ ಸೇಡನ್ನು ತೀರಿಸಿಕೊಳ್ಳತಕ್ಕುದೋ? ಅವಳಪರಾಧಿಯಾದರೂ ಅದಾ ಗದು-ನನ್ನ ಕಣ್ಣಿಗೆ ಯಾವಾಗಲೂ ಕಟ್ಟಿದ ಆ ಸುಂದರ ರೂಪವು ಅದಕ್ಕಾಸ್ಪದಕೊಡುವಂತಹುದಲ್ಲ. ಆದರೆ ಅವ ಳನ್ನು ಕ್ಷಮಿಸುವುದು ನನಗೆ ಅಸಾಧ್ಯವಾದುದಾಗಿತ್ತು. ಆ ನೀಚರು-ಅವರಿಗೇನು ಮಾಡತಕ್ಕುದು? ಇದು ಸುಲಭವಾದ ಕೆಲಸ. ನಾನೇ ಅಲ್ಲಿಯ ಮ್ಯಾಜಿಸ್ಟ್ರೇಟನಾದುದರಿಂದ ಅವರನ್ನು ಹಿಡಿತರಿಸಬಹುದು. ಮರುದಿನ ಮುಂಜಾವಿನಲ್ಲಿ ಹೀಗೆಯೇ ಮಾಡತಕ್ಕುದೆಂದು ನಿರ್ಧರಿಸಿದೆ. ನನಗಾಗ ದೇಹ ತಾಪವೂ ಮನೋವ್ಯಾಕುಲವೂ ಮೇರೆಯನ್ನು ಮೀರಿದ್ದುವು. ಯಾವ ಕಾರ್ಯವನ್ನು ಕೈಕೊಳ್ಳುವುದಕ್ಕೂ ಚೈತನ್ಯವಿರ ಲಿಲ್ಲ.

"ನಾನು ಮನೆಯನ್ನು ಸೇರಿದಾಗ ನಡಿರಾತ್ರಿಯಾಗಿತ್ತು. ಬಾಗಿಲನ್ನು ತೆರೆದ ಸೇವಕನು ಈಗೆರಡು ಗಂಟೆಗಳಿಂದಲೂ ದುರ್ಜಯರಾಯರು ನಿಮ್ಮ ದಾರಿಯನ್ನೇ ಕಾಯುತ್ತಿರುವ ರೆಂದನು. ನನ್ನಲ್ಲೊಂದು ವಿಚಿತ್ರಶಾಂತಿಯುಂಟಾಗಿತ್ತು; ಅದೇಕೋ ನಾನರಿಯೆ. ಬಿರುಗಾಳಿಯು ಬರುವ ಪೂರ್ವ ದಲ್ಲಿ ವಾಯುಮಂಡಲದಲ್ಲಿರುವ ಮಹಾಶಾಂತಿ ಅದಾಗಿರ ಬಹುದು! ನಾನೆಲ್ಲವನ್ನೂ ಹೇಳುವ ಮೊದಲು ಆ ನೀಚ ಪಾಲುಗಾರನೇನು ಹೇಳುವನೋ ನೋಡೋಣವೆಂದು ನಿಶ್ಚ ಯಿಸಿದೆ. ದುರ್ಜಯನು ನರಸೆಯು ಬಡಿಸುತ್ತಿದ್ದ ಫಲಾ ಹಾರವನ್ನು ತಿನ್ನುತ್ತಿದ್ದನು. ನಾನಲ್ಲಿಯೇ ಬಟ್ಟೆಗಳನ್ನು

ತೆಗೆಯುತ್ತಾ ಕುಳಿತುಕೊಂಡೆನು. ಸರಸೆಯು ವಿಜಯಪುರ ದಿಂದ ಬರುವುದಿಷ್ಟೇಕೆ ತಡವಾಯಿತೆಂದು ಕೇಳಿದಳು. ಅವಳ ನುಡಿಯಲ್ಲಿ ಹೆದರಿಕೆಯಿಂದುಂಟಾದ ನಡುಕವಿದ್ದಿತು. ನಾನು ಮಾತಾಡಲಿಲ್ಲ. ನಾಲಿಗೆಯು ಅಂಗುಳಕ್ಕಂಟಿಕೊಂಡಿತ್ತು. ದುರ್ಜಯನು ಬಿಳಿಯ ಸೀರೆಯಿಂದಲಂಕೃತಳಾಗಿದ್ದ ನಿಶೆಯು ಬಹು ಮೋಹಕಳಾಗಿರುವಳೆಂದೂ ತಾನು ಅತಿ ಮಹತ್ವದ ವಿಷಯಗಳನ್ನು ಹೇಳಬೇಕಾಗಿರುವುದರಿಂದ ಮಾವಿನ ತೋಪಿನ ಬಳಿಗೆ ಬರಬೇಕೆಂದೂ ಬಿನ್ನಯಿಸಿದನು. ಅವನೊಂದು ಬಲೆಯನ್ನೊಡ್ಡುವ—ಅಥವಾ ನಾಗಶೆಟ್ಟಿಯ ಕೂರ್ನುಡಿಗನುಸಾರವಾಗಿ ನನ್ನನ್ನೊಯ್ಯುವ—ಕಲ್ಪನೆಯು ಚಕ್ಕನೆ ಹೊಳೆಯಲು ನನ್ನಲ್ಲನೇಕ ವಿದ್ಯುತ್ಪ್ರವಾಹಗಳು ಹರಿದಂತಾದುವು. ನಾನು ಕೂಡಲೇ ಚಟ್ಟನೆ ಎದ್ದುನಿಂತು ದುರ್ಜಯ ಸರಸೆಯರ ಮೇಲೆ ಕ್ರೂರವಾಗ್ಬಾಣಗಳ ಸುರಿಮಳೆಯನ್ನು ಸುರಿಸಿಬಿಟ್ಟೆನು. ನಾನೆಂದುದೇನೆಂದು ನನಗೀಗ ಗೊತ್ತಿಲ್ಲ. ಬಿರುಗಾಳಿಯ ಮಹಾರಭಸದಿಂದ ನಾನು ಚೆನ್ನವಾಲನ ವಿಚಾರವನ್ನೂ—ಚಕ್ಕು ಅಮಾನಿತವಾದುದನ್ನೂ—ಬ್ಯಾಂಕಿನ ಪುಸ್ತಕಗಳನ್ನು ಪರೀಕ್ಷಿಸಿ ನೋಡಿದುದನ್ನೂ—ಊಟದ ಮನೆಯಲ್ಲಿಯ ಸಂಭಾಷಣೆಯನ್ನು ನಾನು ಕೇಳಿದುದನ್ನೂ—ಹೇಳಿರುವ ಸಂಭವವಿದೆ. ದುರ್ಜಯನು ಮತಿಗೆಟ್ಟು ಕುಳಿತಲ್ಲಿಯೇ ಕುಳಿತುಬಿಟ್ಟನು. ನನ್ನ ರಮಣಿಯು ನನ್ನ ಪಾದದ ಮೇಲೆ ಉರುಳಾಡಿ ನಾನೆಂದುದೆಲ್ಲವನ್ನೂ ತನ್ನ ತಪ್ಪೆಂದೊಪ್ಪಿಕೊಂಡು ಹೇಗಾದರೂ ಮಾಡಿ ಕ್ಷಮಿಸಿರೆಂದು ಗೋಳಾಡತೊಡಗಿದಳು. ನೋಟವು ಭಯಂಕರವಾಗಿತ್ತು. ಅವಳ ಧ್ವನಿಯಿನ್ನೂ

ನನ್ನಲ್ಲಿ ಪ್ರತಿಧ್ವನಿಸುತ್ತಿದೆ. ಅಲ್ಲಿದ್ದೊಂದೇ ದೀಪವಾರಲು, ವಿಪರೀತವಾಗಿ ಉರಿಯುವ ಒಲೆಯ ಉರಿಯೇ ಬೆಳಕನ್ನಿತ್ತಿತು. ನೋಡುನೋಡುವ ಸಾಯುತ್ತಿದ್ದ ನಾನು ಎಲ್ಲರ ನೋಡನ್ನೂ ಅವಳಲ್ಲಿಯೇ ಕೇಂದ್ರೀಕರಿಸಿ ಅವಳನ್ನೊಪ್ಪ ಬಿಡಲು ಕತ್ತಿಯಿಂದಿರಿದ ಎಳೆಬಾಳೆಯ ಸಸಿಯಂತೆ ಅವಳು ಕೆಳಗುರುಳಿದಳು. ಮರುಕ್ಷಣದಲ್ಲಿಯೇ ಹುಚ್ಚುಹಿಡಿದ ಮಹಾವ್ಯಾಘ್ರದಂತೆ ಅವಳು ಜಿಗಿದು, ಚೂರಿಯೊಂದನ್ನೆತ್ತಿ ಆಳವಾಗಿ ಎದೆಯೊಳಕ್ಕೊತ್ತಿಕೊಂಡಳು. ನಾನೂ ಅವನೂ ಮುಂದರಿದೆವು. ಬಿಸಿರಕ್ತವು ಚಿಮ್ಮಿ ತಂಗಾಳಿಯಿಂದ ತಣ್ಣಗಾದ ನನ್ನ ಮೋರೆಗೆ ಬೆಂಕಿಯನ್ನಿಕ್ಕಿತು. ಅಯ್ಯೋ ಅವಳು ಸತ್ತಳು! ಅವಳಪರಾಧಗಳೆಲ್ಲವೂ ಮರೆತು ಹೋಗಲು ಅವಳ ಪ್ರೇಮವು ನನ್ನನ್ನು ಪಶ್ಚಾತ್ತಾಪಕ್ಕೆ ಕೂಡಲೇ ಈಡುಮಾಡಿತು!! ”

ಅವನು ಹೃದಯವೊಡೆಯುವಂತೆ ಗೋಳಿಟ್ಟನು. ಮಹಾ ಕಗ್ಗತ್ತಲೆಯಲ್ಲಿದ್ದ ವೀರಪ್ಪನು ಮರುಗಿದನು. ಆ ವಿಶಾಲವಾದ ಭೂಗರ್ಭದಲ್ಲಿ ಕೈಯಾಡಿಸುತ್ತ ವೀರಪ್ಪನು ಮೃತ್ಯುಂಜಯನ ಬಳಿಗೆ ಬಂದು ಅವನನ್ನು ಸಮಾಧಾನಪಡಿಸಿದ ನಂತರ ಮಾತಿಗಾರಂಭವಾಯಿತು.

“ ಅವಳ ಜೀವವನ್ನು ಹಿಂದಕ್ಕೆಳೆತಂದವರಿಗೆ ಸಕಲ ಲೋಕಗಳನ್ನಾದರೂ ಅರ್ಪಿಸಿಬಿಡಲು ನಾನು ಸಿದ್ಧನಾಗಿದ್ದೆ. ಸರಸೆಯು ನನ್ನ ಚರಣಸೀಮೆಯಲ್ಲಿ ಉರುಳಿಬಿದ್ದುದನ್ನು ಕಂಡು ನನ್ನಲ್ಲಿಚ್ಚರವುಂಟಾದೊಡನೆ ಮಹಾಭಯವೂ ವೈದೋರಿತು. ಅಲ್ಲೊಂದು ವೇಳೆ ಯಾರಾದರೂ ಇದ್ದರೆ ನನ್ನನ್ನೇ ಕೊಲೆಪಾತಕಿಯೆನ್ನಬಹುದಾಗಿತ್ತೆಂಬ ವಿಚಾರ

ಬರಲು ನಾನು ಕಡುನಡುಗಿದೆನು. ಕೂಡಲೇ ಮೈಯಲ್ಲಿ ಭೂತಸಂಚಾರವಾದವನಂತೆ ಕಿಟಕಿಯಿಂದ ಹೊರನೆಗೆದು ನಮ್ಮ ಉದ್ಯಾನದಾಚೆ ಗೊತ್ತುಗುರಿಯಿಲ್ಲದೆ ಬಹುದೂರ ಓಡಿದೆನು. ಹಿಂದೊಮ್ಮೆ ತಿರುಗಿನೋಡಿದಾಗ—ಅದೇಕೇಂದರಿ ಯೆನು—ನಮ್ಮ ಆ ಕಿಟಕಿಯಿಂದ ಅಗ್ನಿದೇವನು ಕೋಪಾಗ್ನಿ ಯಿಂದ ಹೊರನುಗ್ಗುತ್ತಿದ್ದನು. ಮನೆಯಿಂದೋಡಿ ಹೋದ ಮಹಾವೇಗದಿಂದ ನಾನು ಬೇಕೆಯಿದ್ದೆಡೆಗೆ ತಿರುಗಿ ಓಡಿ ಬಂದೆನು. ಮಾವಿನ ತೋಪಿನ ಕಡೆಯಿಂದ ಮೂರು ನಾಲ್ಕು ಜನರು ನನ್ನನ್ನು ಬೆನ್ನಟ್ಟಿ ಬಂದು ದಾರಿಯಲ್ಲಿಯೇ ಸುತ್ತು ಗಟ್ಟಿ, ಬಾಯಿಯಲ್ಲಿ ಬಟ್ಟೆಯನ್ನು ತುರುಕಿ, ಚೀಲವೊಂದ ರಲ್ಲಿ ನನ್ನನ್ನೊಗೆದನಂತರ ಅದರ ಬಾಯಿಯನ್ನು ಕಟ್ಟಿ ಅದನ್ನು ಎತ್ತಿಕೊಂಡೊಯ್ದು ಗಾಡಿಯೊಂದರಲ್ಲಿಟ್ಟೊಡ ನೆಯೇ ಅದು ವೇಗವಾಗಿ ಹೋಗಿಬಿಟ್ಟಿತು. ಭಯಭ್ರಾಂತ ರಾಗಿ ಮನೆಯ ಸುತ್ತಲೂ ಸುತ್ತುತ್ತಿದ್ದ ಆ ನನ್ನ ಸೇವಕ ಸೇವಿಕೆಯರಿಗೆ ಈ ಮಹಾಕ್ರಾಂತಿಯು ಗೊತ್ತಾಗಲೇ ಇಲ್ಲ !! ಗಾಡಿಯು ವಿಜಯನಗರದ ಮಾರ್ಗವಾಗಿ ಒಂದೇ ಸಮನೆ ಓಡುತ್ತಿತ್ತು. ದಾರಿಯಲ್ಲೆರಡು ಕಡೆಗಳಲ್ಲಿ ಕುದುರೆಗಳನ್ನು ಬದಲಿಸಿಕೊಂಡು ಅದು ಬೆಳಗುಮುಂಜಾವಿನ ಐದುಗಂಟೆಗೆ ನಿರ್ದಿಷ್ಟ ಸ್ಥಾನವನ್ನು ಸೇರಿತು. ನನಗೇನೂ ತಿಳಿಯಬಾರ ದೆಂದು ಕಣ್ಣು ಕಟ್ಟಿಬಿಟ್ಟಿದ್ದರೂ ನೀಚರೆಲ್ಲರ ಮುಖ್ಯ ಸ್ಥನ ಮಾತಿನಿಂದ ಆ ಗಾಡಿಯನ್ನು ಉದ್ದೇಶಪೂರ್ವಕವಾಗಿ ಸುತ್ತುಸುತ್ತಾದ ಹಾದಿಯಲ್ಲಿ ಹೊಡೆದುಕೊಂಡು ಹೋಗು ತ್ತಿದ್ದುದು ನನಗೆ ತಿಳಿದುಬಂದಿತು. ನಾನಾಗಲೇ ನಿನಗೊರೆ ದಂತೆ ಈ ನೆಲಮನೆಯೊಳಕ್ಕೆ ಅಟ್ಟಲ್ಪಟ್ಟಾಗ ಬೆಳಗಿನ ಆರು

ಗಂಟೆಯಾಗಿರಬಹುದು. ಅಲ್ಲಿಂದಿಲ್ಲಿಯವರೆಗೂ ಹಗಲು ರಾತ್ರಿಗಳ ಭೇದವಿಲ್ಲದ ಈ ನರಕದಲ್ಲಿ ಕಾಲವನ್ನರಿಯುವುದು ಕಠಿಣವಾದರೂ ವೇಳೆಗೆ ಸರಿಯಾಗಿ ಬರುವ ಕೂಳಿನಿಂದ ಕಾಲಗಣನೆಯನ್ನು ಮಾಡುತ್ತಿರುವೆನು. ಕೆಡಕುಮಾಡದಿರುವ ನನ್ನನ್ನಿವರು ಕಷ್ಟಕ್ಕೀಡುಮಾಡಿರುವುದೂ, ಉಪಕಾರಮಾಡಿದವರು ನನಗೆ ಅಪಕಾರವನ್ನೆಸಗಿದುದೂ, ಬಹು ಭಯಂಕರ ಯಾತನೆಯೆಸಿಸಿ, ಒಬ್ಬೊಂಟಿಗನಾಗಿ ಕತ್ತಲೆಯಲ್ಲಿ ನಾನು ಕೊಳೆಯುತ್ತಿರುವಾಗ ನೀನು ಬಂದುದು ನನ್ನ ಸೌಭಾಗ್ಯವೇ ಸರಿ. ಈ ಹೊಲೆಯರೆನ್ನುವುದೇನು? ಯಾವುದೋ ಕಾಗದವೊಂದನ್ನು ನಾನು ಕಣ್ಣೆತ್ತಿ ಸಹ ನೋಡದೆ ಸಹಿಮಾಡಬೇಕಂತೆ; ಇದಲ್ಲದೆ ನಾನು ದೇಶತ್ಯಾಗ ಮಾಡಿ ಅಂಡಮಾನ ದ್ವೀಪವನ್ನು ಸೇರಬೇಕಂತೆ-ಇದಕ್ಕಾಗಿ ಯೋಗ್ಯಹಣವನ್ನು ಸಂಭಾವನೆಯಾಗಿ ಇವರು ಕೊಡುವರಂತೆ. ಈ ಕರಾರಿಗೊಪ್ಪಿದರೆ ನನಗೆ ಬಿಡುಗಡೆಯು ದೊರೆವುದಂತೆ— ನನಗಾಹಾರವನ್ನಿಕ್ಕುವಾಗ ಪ್ರತಿಸಲವೂ ಒಪ್ಪಿಕೊಳ್ಳೆಂದು ಈ ಶರ್ತುಗಳನ್ನೇ ಮುಂದಿಡುವರು. ಅನ್ನವನ್ನಿಕ್ಕುವವನನ್ನು ನನಗೆ ಸಂಬಂಧಿಸಿದ ವಿಷಯದಲ್ಲೆಷ್ಟು ಸಲ ಕೇಳಿದರೂ ಏನೂ ಫಲವಾಗಲಿಲ್ಲ. ನಿನ್ನಿಂದೆಲ್ಲವೂ ತಿಳಿಯಿತು. ಒಂದುವೇಳೆ ಬಿಡುಗಡೆಯು ದೊರೆತರೆ! ನಾವಿಲ್ಲಿಂದ ಹೊರಬಿದ್ದರೆ!! ”

“— ನಿಮ್ಮ ನಿರಪರಾಧಿತ್ವವನ್ನು ಸ್ಥಾಪಿಸುವುದು ಸುಲಭವಾಗುವುದು. ಏಕೆಂದರೆ ಸರಕಾರದ ಕಾಗದಪತ್ರಗಳಲ್ಲಿ ಫೋರ್ಜರಿ ಮಾಡಿದುದು ನಾಗಶೆಟ್ಟಿಯ ಮೇಲೆಯೇ ಬರುವುದು—ಅಲ್ಲಿಯ ವ್ಯವಹಾರದಲ್ಲಿ ನೀವು ಕೈಹಾಕುತ್ತಿದ್ದಿಲ್ಲ

ವೆಂಬುದಕ್ಕೆ ಪುರಾವೆಗಳಿವೆ—ನಿಮ್ಮನ್ನಿಲ್ಲಿಗೆ ತಂದಿರಿಸಿರುವುದೇ ಬಹು ಸಂಶಯಕ್ಕೆಡೆಯನ್ನೀಯುವುದು” ಎಂದು ವೀರಪ್ಪನೆನ್ನಲು, ಮೃತ್ಯುಂಜಯನು “ ವೀರಪ್ಪಾ, ಅದು ಹಾಗಿರಲಿ. ನನ್ನ ಮನೆಯ ವಿಷಯವಿನ್ನೇನು ಗೊತ್ತಿದೆ? ” ಎಂದು ಕೇಳಿದನು.

ವರ್ತಮಾನಪತ್ರದಲ್ಲಿ ಮನೆಯ ಬೆಂಕಿಯು ಬೇಗನೆ ಆರಿಸಲ್ಪಟ್ಟಿತೆಂದೂ ಅದರಿಂದೇನೂ ಅಪಘಾತವಾಗಲಿಲ್ಲವೆಂದೂ, ಬಾಯಿಯವರ ಶರೀರದ ವರೆಗೂ ಅದು ಹಬ್ಬಿರಲಿಲ್ಲವೆಂದೂ, ಆ ಶರೀರವನ್ನು ನಿನ್ನೆಯ ದಿನ ವೈದ್ಯರು ಪರೀಕ್ಷಿಸುವರಿದ್ದರೆಂದೂ ವೀರಪ್ಪನು ವಿವರಿಸಲು, ಮೃತ್ಯುಂಜಯನು ಸ್ವಲ್ಪ ಸಂತುಷ್ಟನಾಗಿ “ ಹಾಗಾದರೆ ಅದು ಆತ್ಮಹತ್ಯವಹುದೆಂದೂ ಕೊಲೆಯಲ್ಲವೆಂದೂ ಸಿದ್ಧವಾಗುವ ಸಂಭವವಿದೆ !! ” ಎಂದನು.

---

## ಪಾರ್ವತಿಯ ಮಹಲಿನಲ್ಲಿ

ಪಾರ್ವತಿಯ ಪರಿಚಯವಿಲ್ಲದ ಪುರುಷರು—ವಿಲಾಸೀ ಪುರುಷರು—ವಿಜಯನಗರದಲ್ಲಿರಲಿಲ್ಲ.

ಇವಳ ದೊಡ್ಡಮನೆಯು ಹಸುಮನಗಲ್ಲಿಯಲ್ಲಿತ್ತು. ಚಾವಡೀ ಚೌಕಿಯಲ್ಲಿಯ ಮನೆಗಳ ಸಾಲೊಂದರ ಹಿಂಭಾಗವೂ ಇವಳಿರುವ ಸಾಲಿನ ಹಿಂಭಾಗವೂ ಕೂಡಿದ್ದುವು. ಇವಳೊಂದು ಮನೆಯನ್ನು ತನ್ನ ಕೆಲಸಕ್ಕಾಗಿ ಚಾವಡೀ ಓಣಿಯಲ್ಲಿ ಬಾಡಿಗೆಗೆ ತೆಗೆದುಕೊಂಡಿದ್ದಳು. ಇದರಿಂದ

ಇವಳ ಮನೆಯನ್ನು ಎರಡೂ ದಾರಿಗಳಿಂದ ಬಂದು ಪ್ರವೇಶಿಸಲವಕಾಶವಿತ್ತು.

ಇವಳು ನಾಲ್ವತ್ತು ವಯಸ್ಸಿನವಳಾದರೂ ಚಲ್ವಿಕೆಯ ಕುರುಹುಗಳಿನ್ನೂ ಮಿನುಗುತ್ತಿದ್ದುವು. ನಿಜಸ್ಥಿತಿಯಲ್ಲಿ ವರುಷಗಳೇರಿದಂತೆ ಇವಳ ಮನೋವಿಕಾರಗಳೂ ಇಮ್ಮಡಿಯಾಗೇರುತ್ತಿದ್ದುವು.

ಸೀರೆ ಕುಪ್ಪುಸಗಳಿಗೆ ಕಸೂತಿಯನ್ನು ಹಾಕುವ, ಅವುಗಳನ್ನು ಜರತಾರಿಯಿಂದಲಂಕರಿಸುವ ವಿದ್ಯೆಯು ಇವಳನ್ನೇ ಆಶ್ರಯಿಸಿತ್ತು. ಇದರಿಂದಿವಳು ಸುಪ್ರಸಿದ್ಧ ಸುಂದರಿಯರ ಸ್ನೇಹ ಭರವಸೆಗಳನ್ನು ಸಂಪಾದಿಸಿದ್ದಳು.

ಆದರೂ ಇವ ವರಿದ್ರಳಲ್ಲ; ಮೋಜಿಗಾಗಿ ಕೆಲಸಕ್ಕಂಟಕೊಂಡವಳು. ಂತರದಿಂದ ಊಟೋಪಚಾರಗಳನ್ನು ಬಯಸಿ ಬರುತ್ತಿದ್ದವರಿಗೆ ಅನುಕೂಲಿಸುವಂತೆ ಕೆಲಸದವರನ್ನಿಟ್ಟುಕೊಂಡು ಇವಳು ದುಡಿಸುತ್ತಿದ್ದರೂ ಊಟದ ಮನೆಯ ಮಾಲಕಳೆಂದು ಭಾವಿಸತಕ್ಕದಲ್ಲ.

ಇವಳಿಲ್ಲಿ ವಾಸಿಸಲಾರಂಭಿಸಿ ೧೫ ವರ್ಷಗಳಾಗಿರಬಹುದು. ಇದಕ್ಕೂ ಮೊದಲಿನ ಇವಳ ಇತಿಹಾಸವನ್ನು ಬಲ್ಲವರಿಲ್ಲ! ಈಗಿರುವುದು ಇವಳೊಬ್ಬಳೇ. ಪತಿಯು ಯಾತ್ರಾರ್ಥಿಯಾಗಿ ಹೋದವನು ಹೋಗಿಯೇ ಬಿಟ್ಟಿರುವನಂತೆ!

ಗಡಿಯಾರದಲ್ಲಿ ಸಾಯಂಕಾಲದ ಆರುಗಂಟೆಯಾದೊಡನೆಯೇ ಮಾರಶರಾವತಾರಳಾದ ತಾರೆಯು ಕುದುರೆಯ ಬಂಡಿಯಿಂದ ಬಂದಿಳಿದಳು. ಹನುಮನಗಲ್ಲಿಗೇ ಉಲ್ಲಾಸವನ್ನಿತ್ತ ನಲ್ಲೆಯನ್ನೊಳಗೆ ಪಾರ್ವತಿಯು ಬರಮಾಡಿಕೊಳ್ಳಲು ಭಯವಿಹ್ವಲಳಾದ ವನಿತೆಯು ಧೈರ್ಯಗೊಂಡು

ಅಡಿಯಿಟ್ಟಳು.

ಅವಳೊಳಗೆ ಬಂದೊಡನೆಯೇ ಭೀಮರಾಯನು ಸ್ವಾಗತಿಸಿದನು. ಪಾರ್ವತಿಯು ಕೋಣೆಯ ಬಾಗಿಲನ್ನಿಕ್ಕಿ ಸಪ್ಪಳವಿಲ್ಲದ ನಡಿಗೆಯಿಂದ ಹೊರಟುಹೋದಳು.

ಗಡಿಯಾರದಲ್ಲಿ ಒಂಬತ್ತು ಬಾರಿಸಿದಾಗ ಶಿವಪ್ರಸಾದರು ಬಂದರೆಂದು ಸೇವಕನು ಹೇಳಲು ಪಾರ್ವತಿಯು ಲಗುಬಗೆಯಿಂದೆದ್ದು ಹೋದಳು.

ಶಿವಪ್ರಸಾದನು ಮಹಾಧನಿಕನಾದ ಒಬ್ಬೊಂಟಿಗನು. ಇಪ್ಪತ್ತೊಂದು ಇಪ್ಪತ್ತೆರಡು ವಯಸ್ಸಿನ ಈ ಸುಂದರ ತರುಣನು ಉಗ್ರವಂಶ ಹೆಸರನ್ನು ಕೇಳುವನೇ ಇದೇ ಥಾ ಭಯಂಕರ ಕೃತ್ಯವೇನು ಮಾಡುತ್ತಿದ್ದನು. ಆದರೆ ಒಬ್ಬಳನ್ನೇ ನೆಚ್ಚಿಕೊಂಡಿರುವುದು ಇವನಿಗೆ ಸಹಜ ಸ್ವಭಾವವಾಗಿತ್ತು. ಸ್ತ್ರೀಪಕ್ಷಪಾತಿಯಾದ ಇವನು ಇತರ ವಿಷಯಗಳಲ್ಲಿ ದುಂದುಗಾರನಲ್ಲ. ಇವನಂಥಾ ಮಹಾತ್ಮರಿಗೆ ಬೇಕಾದ ಪಾರ್ವತಿಯನ್ನು—ಅನುಕೂಲೆಯಾದ ಪಾರ್ವತಿಯನ್ನು—ಇವನೂ ಆಶ್ರಯಿಸಿದ್ದನು. ಅವಳಲ್ಲಿ ಕೆಲಸಕ್ಕೆಂದು—ಯಾವ ಕೆಲಸವೋ?—ಬಂದು ಸೇರಿರುವ ಹತ್ತು ಹನ್ನೆರಡು ರಮಣೀಮಣಿಗಳಲ್ಲಿ ಮುಕ್ಕಾಲು ಪಾಲು ಜನರು ಹಗಲಿನಲ್ಲಾಗದಿದ್ದರೆ ರಾತ್ರಿಯಲ್ಲಾದರೂ—ಇವನ ಸೇವೆಯನ್ನೇ ಮಾಡಬೇಕಾಗುತ್ತಿತ್ತು.

ಪಾರ್ವತಿಯು ಬಂದೊಡನೆಯೇ ಅವನು ಮೇಲಕ್ಕೆದ್ದು ಅವಳು ಕುಳಿತೊಡನೆಯೇ ತಾನೂ ಕುಳಿತುಕೊಂಡು, "ಬಾಯಿ, ಇಲ್ಲ ನೋಡಿ. ಒಂದು ಕೆಲಸದ ಸಲುವಾಗಿ ಎಂದಿನಂತೆ ಸಲಹೆಯನ್ನು ಕೇಳಲು ನಾನಿಂದು ಬಂದಿರು

ಪೆನು. ಸೌಂದರ್ಯೋಪಾಸನಾಕಾರ್ಯದಲ್ಲಿ ಸಂಪೂರ್ಣವಾಗಿ ನಿನ್ನ ಸಹಾಯವನ್ನೇ ನಂಬಿರುವ ಭೃತ್ಯನು ಇಗೋ ಇಲ್ಲಿದ್ದಾನೆ. ದಿನದಿನವೂ ಒಂದೇ ತರದ ಪಕ್ವಾನ್ನವನ್ನುಂಡವನ ಪರಿಯು ಅವನದಾಗಿದೆ. ನನ್ನ ಅಭಿಪ್ರಾಯವೇನೆಂದರೆ ಕಳೆದ ಹತ್ತು ವರುಷಗಳಿಂದಲೂ ಇಲ್ಲಿಯೇ ಆಗಲಿ ಇನ್ನೆಲ್ಲಿಯೇ ಆಗಲಿ ನನ್ನ ಹೃದಯವನ್ನು ತೃಪ್ತಿಸಿ ಮನವನ್ನು ಮರುಳುಗೊಳಿಸುವ ರಂಭೆಯೊಬ್ಬಳ ಸಂದರ್ಶನವಿನ್ನೂ ಆಗಿಲ್ಲ ” ಎಂದನು.

“ಇಂತಹ ದಾನಸಾಹೇಬರಲ್ಲಿ ಇದಾರಿಗೆ ಕನಿಕರವುಂಟಾಗಲಿಕ್ಕಿಲ್ಲ!! ” ಎಂದು ಅವಳೆಂದಳು.

“ಕನಿಕರವೇ! ಅಹುದು ಹಾಗೆಯೇ ಸರಿ. ಈ ದಿನವೇಕೋ ನೀವು ಅತಿ ಉಲ್ಲಾಸದಿಂದಿರುವಂತಿದೆ. ನಾನಿಂತು ನುಡಿಯುವುದನ್ನು ಮನ್ನಿಸಿರಿ. ನಿಮಗಿಪ್ಪತ್ತೇಳು ವರ್ಷಗಳಾಗಿವೆಯೆಂದು ಹೇಳಿದರೆ (ಶಿವಪ್ರಸಾದನಿಗೆ ಅವಳಿಗೆ ನಾಲ್ವತ್ತು ವರುಷವೆಂಬುದು ಗೊತ್ತಿತ್ತು) ಅದು ನಿಜವೆಂದು ಬಹುಶಃ ಯಾರೂ ನಂಬಲಿಕ್ಕಿಲ್ಲ. ಏಕೆಂದರೆ ನಿಮ್ಮ ಕಾಯವು ಕಾಂಚನದಂತೆ ಕಾಂತಿಯುಕ್ತವಾಗಿದೆ; ಹಲ್ಲುಗಳ ಮುತ್ತುಗಳನ್ನಿಳಿಕೆಗೆಯ್ದು ನಗುತ್ತಿವೆ; ನಿಮ್ಮ ನೇತ್ರಗಳಿಂದ ನಮ್ಮನ್ನು ಪರವಶಗೊಳಿಸುವ—”

“ದಾಯರೇ, ಇದು ಸಾಧ್ಯವೇ? ರುಚಿಯನ್ನು ಬದಲಿಸಲು ನೀವು ನನ್ನನ್ನೇ ಪ್ರೀತಿಸುತ್ತಿರಬಹುದೇ ? ”

“ನಾನೀ ವಿಷಯದಲ್ಲಿ ನಿಜವಾಗಿಯೂ ದೀರ್ಘವಿಚಾರದಲ್ಲಿದ್ದೇನೆ. ಚಳ್ವಿಕೆಯೇ ಬಂದು ಪಾದಾಕ್ರಾಂತವಾಗಿರುವುದರಿಂದ ಚರಣಗಳಿಷ್ಟು ಅಂದವಾಗಿರಬಹುದು. ನೀನೆನ್ನ

ಪ್ರಿಯೆ. ಗಂಗಾಚರಣನೆಂದು ನನ್ನನ್ನು ಕೆಲವರು ಕರೆಯುವುದಿಲ್ಲವೇ? ಓಹೋ ಇದೇನು? ನಿಮ್ಮ ಮುಖದಲ್ಲಿ ಭಯಂಕರತೆಯು ವ್ಯಕ್ತವಾಗುತ್ತಿದೆ. ನಿಮ್ಮನ್ನು ಅಸಂತುಷ್ಟರನ್ನಾಗಿಸುವುದು ನನ್ನನ್ನು ಮೀರಿದ ಮಾತಾಗಿರುವುದೆಂಬುದು ನಿಮಗೆ ಗೊತ್ತಿದೆ. ನಿಮ್ಮ ಪತಿಗಳ ನೆನಪನ್ನು ಅಕಸ್ಮಾತ್ತಾಗಿ ತಂದುಕೊಟ್ಟು ಮನನೋಯಿಸಿದುದಕ್ಕಾಗಿ—ನನ್ನ ಅಚಾತುರ್ಯಕ್ಕಾಗಿ—''

''ಶಿವಪ್ರಸಾದರೇ, ಹೋಗಲಿ ಬಿಡಿ. ನಮ್ಮಲ್ಲಿ ನಿಮಗಿರುವ ಅತ್ಯಂತ ಸಲಿಗೆಯು ಬೇಕಾದಂತೆ ನುಡಿಯಲು ನಿಮಗಾಸ್ಪದವೀಯುತ್ತಿದೆ. ಈಗ ವಿಷಯವನ್ನು ಬದಲಿಸೋಣ. ಕಳೆದ ಹತ್ತು ವರುಷಗಳಿಂದಲೂ ನಿಮ್ಮನ್ನು ಸಂಪೂರ್ಣವಾಗಿ ಮೈಮರೆಯಿಸುವ ರಂಭೆಯೊಬ್ಬಳು ಸಿಕ್ಕಲಿಲ್ಲವೆಂದು ನೀವೆನ್ನಲಿಲ್ಲವೇ? ಅಂಥವಳೊಬ್ಬಳಿದ್ದಾಳೆ. ನಿಮ್ಮನ್ನೊಂದು ಸಾಹಸದಲ್ಲಿ ಹೂಡುವ ಯೋಗ್ಯಯುಕ್ತಿಯೊಂದನ್ನು ಚಿಂತಿಸುತ್ತಿದ್ದೇನೆ.''

''ಓಹೋ, ಹೀಗೆಯೋ!! ಅದೇನು ಹೇಳಿರಿ—ವಿವರವನ್ನರಿಯಲು ಬಹು ಹಾತೊರೆಯುತ್ತಿರುವೆನು.''

''ಸ್ವಲ್ಪ ತಾಳಿ. ಎಲ್ಲವೂ ತಾನಾಗಿಯೇ ತಿಳಿದುಬರುವುದು. ನನ್ನ ಗುರುತಿನ ವಿಲಾಸೀ ಸದ್ಗೃಹಸ್ಥನೊಬ್ಬನು ಕಾನನಾಂತರದಲ್ಲಿ ಎರಡು ಭೂಮಣಿಗೇ ಭೂಷಣವೆನಿಸುವ ಹೂಗಳಿರುವುದನ್ನು ಕಂಡುಹಿಡಿದಿರುವನು.''

''ಒಂದೇ ಗೊಂಚಲಿನಲ್ಲಿರುವ ಎರಡು ಕುಸುಮಗಳಷ್ಟೇ?''

''ಅಹುದು. ಅವರ ಸೌಂದರ್ಯವು ಅರಮನೆಯನ್ನ

ಲಂಕರಿಸಿರುವ ಅನರ್ಘ್ಯರತುನಗಳ ಕಾಂತಿಯನ್ನು ಕುಚೇಷ್ಟೆ ಮಾಡುವಂತಹುದು. ಅವರಲ್ಲೊಬ್ಬಳನ್ನು ನಾನು ನೋಡಿದ್ದೇನೆ—ಸತ್ಯವನ್ನು ನುಡಿಬೇಕೆಂದರೆ ಈ ವೇಳೆಯಲ್ಲಿ ಅವಳಿಲ್ಲಿಯೇ ಇರುವಳು—''

''ನನ್ನಿಂದ ಈ ರಾತ್ರಿಯೊಂದರಲ್ಲಿಯೇ ಸಾವಿರಾರು ರೂಪಾಯಿಗಳನ್ನೆಳೆಯಬೇಕೆಂದು ನಿಮ್ಮ ನಿಶ್ಚಯವೋ? ''

'' ಛೇ, ಹಾಗಲ್ಲ. ಕಿರಿಯಳ ಕೆಲಸವಾಗಿಹೋಗಿದೆ. ನಾವಿಲ್ಲಿ ಮಾತನಾಡುತ್ತಿರುವಾಗಲೇ ಅವಳು ಮನ್ಮಥನ ಶಾಲೆಯಲ್ಲಿ ಅ ಆ ಇ ಈ ಕಲಿಯುತ್ತಿರುವಳು. ಹಿರಿಯಳು ನಿನ್ನವಳಾಗುವಳು."

"ಹಾಗಾದರೆ ಅವಳೂ ಮೋಹಕಳೇ? "

" ನಾನಿನ್ನೂ ಅವಳನ್ನು ನೋಡಿಲ್ಲ. ಆದರೂ ಕೇಳಿ ತಿಳಿದಿದ್ದೇನೆ. ವಯಸ್ಸಿನಲ್ಲಿ ಹಿರಿಯಳಾದವಳು ರೂಪದಲ್ಲಿಯೂ ಕಿರಿಯಳಲ್ಲವಂತೆ. ನಿಜಸ್ಥಿತಿಯಿಂತಿದ್ದರೆ ನಿಮ್ಮ ಇಚ್ಛೆಯು ಕೆಲಕಾಲದವರೆಗೂ ಒಂದೇ ವಸ್ತುವಿನಲ್ಲಿ ನೆಲಸಿರಬಹುದು."

"ನೀನು ನನ್ನನ್ನು ಮರುಳ್ಗೊಳಿಸಿರುವಿ! ಯಾವಾಗ ಮತ್ತು ಎಲ್ಲಿ ಈ ನಾರೀಮಣಿಯನ್ನು ನಾನು ನೋಡಬಹುದು? "

"ಸ್ವಲ್ಪ ವಿವರಿಸುವೆನು. ದೊಡ್ಡಮನೆತನದ ಮರ್ಯಾದಸ್ಥ ಸದ್ಗೃಹಸ್ಥನ ಮಕ್ಕಳವರು. ಅವನೀಗ ಬಹು ಬಡವನಾಗಿದ್ದಾನೆ. ಊರಿನಿಂದಿನ್ನೂ ಬಂದಿಲ್ಲ. ಕಿರಿಯಳಾದ ತಾರೆಯು ಈಗಾಗಲೇ ಒಬ್ಬನ ವಶಳಾಗಿದ್ದಾಳೆ-ಹಿರಿಯಳಾದ ಲೀಲೆಯು ನಿನ್ನವಳಾಗಬಹುದು. ತಾರೆಯು ತನ್ನ ಪ್ರಿಯನು ತನ್ನನ್ನು ಲಗ್ನವಾಗುವನೆಂದು ನಂಬಿರುವಳು. ಆದರೆ ಅವ

ಸರ್ವಥಾ ಕಾರ್ಯವನ್ನೆಸಗುವವನಲ್ಲವೆಂದು ನನಗೆ ಗೊತ್ತಿದೆ. ಹೋದ ರಾತ್ರಿಯಲ್ಲಿ ಅವನು ತನ್ನ ಪ್ರೇಮವನ್ನು ಪ್ರಕಟಪಡಿಸಿದನು—ಈ ರಾತ್ರಿಯಲ್ಲವಳು ಇಲ್ಲಿಗೆ ಬಂದಿರುವಳು. ಲೀಲೆಯ ಪರಿಸ್ಥಿತಿಯೂ ಹೀಗೆಯೇ ಆಗಬಹುದು. ಇಂತಹ ಕಾರ್ಯದಲ್ಲಿ ವಿಜಯವನ್ನು ನೀನಲ್ಲದೆ ಇನ್ನಾರು ಹೊಂದುವರು?"

"ಕಾಮಾಂಧಮಣಿಯ ಮಿತಿಮೀರಿದ ಉತ್ಸಾಹವನ್ನು ಉಪಯೋಗಿಸಿ—"

"ಹಾ ತಡೆ, ನಾನು ಹೇಳುವುದಿನ್ನೂ ಮುಗಿದಿಲ್ಲ. ಅದೇನೆಂದರೆ ಒಂದು ಉಪಾಯ. ಹೇಗಾದರೂ ಕೋಟೆಯನ್ನೊಳ ಹೊಕ್ಕರೆ ಜಯವು ಸಿದ್ಧ. ನಿಮಗೆ ವನಿತಾನ್ವೇಷವು ಬಹು ಒಪ್ಪುವುದೆಂದು ನನ್ನ ಅಭಿಪ್ರಾಯ."

"ನನಗಾ ಯುಕ್ತಿಯು ಅರ್ಥವಾಯಿತು, ಅತಿ ಸುರಸ ವಿಷಯವದು! ಹರೆಯದ ರಮಣಿ—ಜನಸಂದಣಿಯಲ್ಲಿ ತಾಯಿಯನ್ನು ಕಾಣದಂತಾದವಳು—ಮನೆಯ ದಾರಿಯು ಗೊತ್ತಿಲ್ಲ-ಹೊತ್ತು ಮುಳುಗಿ ತುಸು ಹೊತ್ತಾಗಿದೆ—ದಿಕ್ಕುತೋಚದ ಮನಃಸ್ಥಿತಿ—ರಾತ್ರಿಯಲ್ಲಿರಲು ಸ್ಥಳಕೊಡಿರೆಂದು ಅಂಗಲಾಚಿಕೊಳ್ಳುವಳು—"

"ವಹವ್ವಾ! ನನ್ನ ಅಭಿಪ್ರಾಯವನ್ನು ಬಹು ಚನ್ನಾಗಿ ಗ್ರಹಿಸಿದ್ದೀರಿ. ನಿಮ್ಮ ಕೌತುಕವು ಕೆಲಮಟ್ಟಿಗೀಗ ಕಡಿಮೆಯಾಗಿರುವುದರಿಂದ ಮೋಹಿನಿಯರ ವಿಷಯದಲ್ಲಿ ಎರಡು ನುಡಿ ನುಡಿಯುವೆನು. ನಾನಾಗಲೇ ಹೇಳಿರುವಂತೆಯೇ ಬಹು ಉದಾರಿಯಾದ ಮಹನೀಯನೊಬ್ಬನು ಕಿರಿಯಳಾದ ತಾರೆಯನ್ನು ವಶಪಡಿಸಿಕೊಂಡಿದ್ದಾನೆ. ಅವಳ ತಂದೆಯು

ಊರಿಗೆ ಬಂದಮೇಲೆ ಅವಳನ್ನು ಮನೆಯಲ್ಲಿ ಸಂದರ್ಶಿಸಲು ಬಲವಾದ ಕಾರಣಗಳು ಅಡ್ಡಬರುವುದರಿಂದ ತನಗೆ ತೃಪ್ತಿಯೆನಿಸುವವರೆಗೂ ಅವಳನ್ನಿಲ್ಲಿಯೇ ಸ್ವಾಗತಿಸುವ ಅಭಿಲಾಷೆಯು ಅವನಿಗಿದೆ. ತಾರೆಗಾದರೋ ಅಕ್ಕನನ್ನು ತಪ್ಪಿಸಿ ಬಹಳ ವೇಳೆಯವರೆಗೂ ಬಂದಿಲ್ಲಿರುವುದು ಕಠಿಣತಮವಾಗಿದೆ. ತಾರೆಯ ಪ್ರೇಮಸಾಹಸಕ್ಕೆ ಅವಳ ಸಹಾಯವು ದೊರೆಯಬೇಕಾದರೆ ಲೀಲೆಯನ್ನೂ ಬೇರೊಂದು ಪ್ರೇಮಲೀಲೆಯಲ್ಲಿ ತೊಡಗಿಸಬೇಕು. ಇದರಿಂದ ಅಕ್ಕತಂಗಿಯರ ಗುಟ್ಟು ಗೂಢತರವಾಗಿಬಿಡುವುದಲ್ಲದೆ ಅವರಿಬ್ಬರೂ ಸೇರಿ ತಂದೆಯ ಕಣ್ಣಿನಲ್ಲಿ ಮಣ್ಣನ್ನೆರಚಬಲ್ಲವರಾಗುವರು."

"ಅತ್ಯುತ್ತಮ ವಿಚಾರವಿದು!!"

"ತಾರೆಯ ನಲ್ಲನು ತನ್ನ ಕಾರ್ಯವು ಗೂಢತರವಾಗಿರುವಂತೆ ಮಾಡಲು ಇದವಶ್ಯವೆಂದು ಸೂಚಿಸಿದನು. ಅವನು ಬಹು ದೊಡ್ಡವನು; ಶೀಘ್ರದಲ್ಲಿಯೇ ವಿವಾಹಿತನಾಗುವವನು. ಇದಕ್ಕೂ ಹೆಚ್ಚಿಗೆ ಏನೂ ಹೇಳಲಾಗುವುದಿಲ್ಲ; ಏಕೆಂದರೆ ನಿಮಗೆ ಗೊತ್ತಿರುವಂತೆ ಸದ್ಗೃಹಸ್ಥರಲ್ಲಿ ಪರಸ್ಪರರ ಸಂಬಂಧವಾಗಿ ನಾನೇನೂ ಹೇಳಹೋಗುವುದಿಲ್ಲ. 'ಗೌರವ ಮತ್ತು ಗುಟ್ಟು'—ಇವೇ ನನ್ನ ಲಕ್ಷ್ಯಗಳು."

"ಹಾಗಿರುವುದನ್ನರಿತೇ ನಾನಿಲ್ಲಿಗೆ ಬರುತ್ತಿರುವುದು. ಇತರರ ವಿಚಾರವಾಗಿ ನಾನೇನೂ ಕೇಳದಿರುವುದು ನನ್ನ ಹೆಚ್ಚಳವಲ್ಲವೇ? ಲೀಲೆಯು ನನ್ನವಳಾದರೆ ಸರಿ; ತಾರೆಯ ನಲ್ಲನಾರಾದರೇನು? ನನ್ನ ಮನಸ್ಸಿಗೆ ಸಂಪೂರ್ಣವಾಗಿ ಬ ದಿರುವ ಈ ನಟನೆಯನ್ನೆಂದು ನಟಿಸಲಿ?"

"ಬಹುಶಃ ನಾಳೆಯ ಸಂಜೆಯಲ್ಲಿ. ನಾಳಿನ ಬೆಳಗಿನಲ್ಲಿ

ಯಾವುದನ್ನೂ ನಾನು ನಿಶ್ಚಿತವಾಗಿ ತಿಳಿಸಬೇಕೆಂದಿದ್ದೇನೆ."

* * * *

ಪಾರ್ವತಿಯ ಮಹಲಿನಿಂದ ತಾರೆಯು ಹೊರಬಿದ್ದಾಗ ಹತ್ತರ ಮೇಲಾಗಿತ್ತು. ಅವಳೊಡನೆ ಭೀಮರಾಯನು ಹೊರಬರಲಿಲ್ಲ; ತಾರೆಯೊಬ್ಬಳೇ ಮನೆಯ ಮಾರ್ಗವನ್ನನುಸರಿಸಿದಳು. ಒಬ್ಬರೊಡನೊಬ್ಬರು ಹೊರಬಿದ್ದರೆ ಮಹಲಿನ 'ಮರ್ಯಾದೆ'ಗೆ ಭಂಗಬರುವುದೆಂದು ಭೀಮರಾಯನು ಸೂಚಿಸಿದನು. ಈ ಸಂಧಿಯಲ್ಲಿ ತಂದೆಯು ಊರಿಗೆ ಬಂದಿರದಿದ್ದರೆ ಮರುದಿನ ಮುಚ್ಚಂಜೆಯ ಮುಂದೆ ತಾನಿಲ್ಲಿಗೇ ಬರುವುದಾಗಿಯೂ ಅವನೊಂದು ವೇಳೆ ಬಂದುಬಿಟ್ಟರೆ ಭೀಮರಾಯನು ಕೊಟ್ಟ ವಿಳಾಸಕ್ಕೆ ಕಾಗದವನ್ನು ಬರೆಯುವುದಾಗಿಯೂ ವಚನವಿತ್ತು ತಾರೆಯು ತೆರಳಿದಳು.

ತಾನಿಷ್ಟು ಹೊತ್ತಿನತನಕ ಹೊರಗೇಕೆ ಹೋಗಿದ್ದೆನೆಂದು ತಾರೆಯು ತಮ್ಮಕ್ಕನಿಗೇನು ತಿಳಿಯಹೇಳಿದಳೋ ದೇವರೇ ಬಲ್ಲ!! ಆದರಿಷ್ಟು ಮಾತ್ರ ನಿಜ; ಲೀಲೆಗೇನೂ ಸಂಶಯವುಂಟಾಗಲಿಲ್ಲ. ತಾರೆಯ ಮಾತಿನಲ್ಲಿಯ ನಡುಕವೂ ಕಾರಣವಿರಹಿತ ಮಂದಸ್ಮಿತವೂ ಮೇಲಿಂದಮೇಲೆ ಬಣ್ಣವೇರಿ ಮಾಯವಾಗುವ ಕದಪಿನಲ್ಲಿಯ ಕೆಂಪೂ ತನುವಿನಲ್ಲಿಯ ನಸು ಅಶಕ್ತತೆಯೂ ಏನೂ ಅರಿಯದ ಲೀಲೆಗೆ ಅರಿಯಲಾಗಲಿಲ್ಲ.

---

# ರಜನೀ ರಾಜ್ಯದಲ್ಲಿ

ಮಾತನಾಡಿ ದಣಿದ ಮೃತ್ಯುಂಜಯನು ಕೆಲಕಾಲ ಮಲಗಿಕೊಂಡನು. ದಿಕ್ಕು ತೋರದಂತಿದ್ದ ವೀರಪ್ಪನೂ ನಸುನಿದ್ದೆಯಲ್ಲಿದ್ದನು. ಇವರನ್ನಿಟ್ಟ ನೆಲಮನೆಯ ನೆಲಕ್ಕೆ ತಂಪೇರಿದ್ದುದರಿಂದ ಇವರು ಹುಲ್ಲನ್ನೇ ಹಾಸಿಕೊಂಡು ಮಲಗಬೇಕಾಗಿತ್ತು. ಒಂದು ಸಲ ಕೊಟ್ಟ ಹುಲ್ಲನ್ನು ಹೊರತೆಗೆದು ಅದನ್ನು ಬದಲಿಸುವ ಪರಿಪಾಠವನ್ನು ಭಿಕ್ಷುಕ ಸಂಘದವರು ಇಟ್ಟಿರಲಿಲ್ಲ.

ಒಮ್ಮೆ ತಿರುಗಣಿಯು ತಿರುಗಿದಂತಾಗಿ, ಭಾರವಾದ ಬಾಗಿಲು ತೆರೆಯಲ್ಪಟ್ಟನಂತರ ಮಿಣಿಮಿಣಿಯಾದ—ಅತಿ ಮಸುಕಾದ— ಕಿರಣಗಳು ಸೆರೆಮನೆಯನ್ನು ಬಂದು ಸೇರಿದುವು. ಆದು ಬಂದಿಗಳಿಬ್ಬರೂ ಪರಸ್ಪರರ ಮೋರೆಯನ್ನು ಕಂಡುಕೊಳ್ಳುವಷ್ಟು ಸ್ಪಷ್ಟವಾಗಿರದೆ, ಬಾಗಿಲ ಬಳಿಯಲ್ಲಿ ಮನುಷ್ಯಾಕೃತಿಯೊಂದು ಬಂದು ನಿಂತಿರುವುದೆಂದು ಗ್ರಹಿಸುವಷ್ಟರ ಮಟ್ಟಿಗೆ ಮಾತ್ರವಿತ್ತು.

ಆ ಕೊಬ್ಬಿದ ಶರೀರವು ಕರ್ಕಶನುಡಿಯಲ್ಲಿ ನುಡಿಯಿತು:

" ಮೃತ್ಯುಂಜಯಾ, ಹೇಗಿರುವೆ? ಹೊಸಬನು ನಿನ್ನ ಮನಸ್ಸಿಗೆ ಬರುವಂತಿರುವನಷ್ಟೇ? "

" ಇದಕ್ಕೇನು ಹೇಳಲಿ? ನನ್ನ ಮನಸ್ಸಿಗವನು ಬರುವನೆಂದೊಡನೆಯೇ ನೀವು ಅವನನ್ನು ಬೇರೆಡೆಗೊಯ್ಯುತ್ತೀರಿ; ನನಗೆ ಏಕಾಂತವಾಸವೇ ಹಿತವೆನಿಸುವುದೆಂದರೆ ನನ್ನನ್ನು ನೋಯಿಸಲು ನೀವು ಅವನನ್ನಿಲ್ಲಿಯೇ ಇಡುವಿರಿ. "

" ಅದಿರಬಹುದು, ಆದರೂ ಅವನನ್ನು ಇಲ್ಲಿಟ್ಟಿರುವುದರ

ಕಾರಣವನ್ನರಿಯಲು ನೀನು ಕುತೂಹಲಿಯಾಗಿರಬಹುದು. ಹಾಗಾದರೆ ಮೃತ್ಯುಂಜಯಾ, ಕೇಳು. ಹೊರ ಪ್ರಪಂಚದಲ್ಲಿ, ಮುಖ್ಯವಾಗಿ ವಿಜಯಪುರದಲ್ಲಿ, ನಿನ್ನ ಮಾನವು ಮೂರು ಕಾಸಾಗಿರುವುದನ್ನು ನೀನರಿಯಲೇದೇ ನಾವು ಹೀಗೆ ಮಾಡಿದೆವು ಒಂದು ವೇಳೆ ನಾನೇ ಇವೆಲ್ಲವನ್ನೂ ವಿವರಿಸಿದ್ದರೆ, ನಮ್ಮ ಕರಾರುಗಳಿಗೆ ನಿನ್ನನ್ನೊಪ್ಪಿಸುವ ಉದ್ದೇಶದಿಂದ ನಿಜಸ್ಥಿತಿಯನ್ನು ಕತ್ತಲೆಗಿಂತಲೂ ಕಪ್ಪಾಗಿ ಮಾಡುತ್ತಿದ್ದೇವೆಂದು ನಿಜವಾಗಿಯೂ ನಿನ್ನ ಭಾವನೆಯಾಗುತ್ತಿತ್ತು. ವೀರಪ್ಪನು ನಡೆದುದೆಲ್ಲವನ್ನೂ ತಿಳಿದಿರುವುದರಿಂದಲೂ, ನಿನ್ನ ವಿಷಯದಲ್ಲಿ ಜನಗಳ ಅಭಿಪ್ರಾಯವನ್ನು ಅವನು ಬಲ್ಲವನಾದುದರಿಂದಲೂ, ಅವನು ನಿನಗೆಲ್ಲವನ್ನೂ ಇದುವರೆಗೂ ಹೇಳದಿರಲಾರೆನು. ಸರಿಯಲ್ಲವೇ ? "

"ಅಹುದು ನನ್ನ ಸಂಗಡಿಗನು ನನ್ನನ್ನು ಗೋಳಾಡಿಸಲೆಂದು ನಿನ್ನನ್ನಿಟ್ಟುಕೊಂಡವರು ಹೆಚ್ಚು ನೀಚರೆಂದು ನನ್ನ ಭಾವನೆಯಾಗುವಂತೆ ವಿಷಯವನ್ನು ವಿವರಿಸಿರುವನು. ಈ ಕ್ರೌರ್ಯದಿಂದ ನನ್ನನ್ನು ಬಿಡಿಸಲು ನಿಮಗೆಷ್ಟೂ ದಯ ಬರುವುದಿಲ್ಲವೇ ? ಆ ವೈರಿಗಳು ನನ್ನನ್ನಿಲ್ಲಿಟ್ಟುದ್ದಕ್ಕಾಗಿ ನಿಮಗೆ ಬಹುಮಾನವನ್ನು ಸಲ್ಲಿಸಬಹುದು—ನನ್ನನ್ನು ಬಿಡುಗಡೆ ಮಾಡಿದರೆ ನಾನು ಅದಕ್ಕೂ ಹೆಚ್ಚಿನ ಬಹುಮಾನವನ್ನೀಯುವೆನು. ನನ್ನ ಮಿತ್ರರೆಂಥವರೆಂಬುದು ನನಗೆ ಗೊತ್ತಿಲ್ಲ!! ನಾನೊಂದು ಪತ್ರವನ್ನು ಕೊಟ್ಟರೆ ನನ್ನ ಸ್ವಾತಂತ್ರ್ಯದ ಬೆಲೆಯಾಗಿ ೨೫೦೦೦ ರೂಪಾಯಿಗಳು ನಿನಗೆ ದೊರೆಯುವುವು."

"ಇಗೋ, ಇನ್ನು ಇಂತಹ ಹುಚ್ಚಾಟವು ನನ್ನೊಡನೆ

ಬೇಡ! ಲಂಚದಾಸೆಯು ನನಗಿಲ್ಲ. ಬಿಡುಗಡೆಯನ್ನು ಹೊಂದುವ ದಾರಿಯೆಂದರೆ ಕಾಗದವೊಂದರ ಕಣ್ಣು ಮುಚ್ಚಿ ಸಹಿಮಾಡುವುದು."

"ಹಾಗಾದರೆ ನಾನು ಸಹಿ ಮಾಡುವುದೇ ಇಲ್ಲ!"

"ನಿನ್ನಂತೆಯೇ ಆಗಲಿ. ಇಂದಿನ ಮಾತು ಇನ್ನು ಕೆಲ ದಿನಗಳ ಮುಂದುಳಿಯುವುದಿಲ್ಲ. ವೀರಪ್ಪಾ, ಎಚ್ಚರವಾಗಿ ದೆಯೋ ? "

"ಹುಲ್ಲಿನ ಹಾಸಿಗೆಯು ಪೂರ್ಣನಿದ್ರೆಯ ಸ್ಥಾನವಲ್ಲ ನಿನಗೇನು ಬೇಕಾಗಿದೆ ? "

"ಇಂದಾಗುವುದನ್ನು ಮುಂದಕ್ಕಿಡುವುದು ವಿಹಿತವಲ್ಲ. ನಿನ್ನ ಸ್ವಾತಂತ್ರ್ಯದ ಬೆಲೆಯು ಐದುಸಾವಿರ ಮಾತ್ರ. ನಿಮ್ಮ ವರ್ತಕ ಧಣಿಗಳಿಗೊಂದು ಪತ್ರವನ್ನು ಬರೆಯುವೆಯೋ? ಇದೂ ಬಹಳವೆನ್ನುವೆಯೋ ? ನೀನವರನ್ನು ಕೇಳಿ ನೋಡು ವುದರಿಂದ ಹಾನಿಯಿಲ್ಲ, ಅಥವಾ ಬೇರೇ ಮಿತ್ರರನ್ನು—"

"ಅಂಥವರಾರೂ ಇಲ್ಲ. ನನ್ನ ಜೀವವಿರುವ ವರೆಗೂ ನಾನಿಲ್ಲಿ ಕೊಳೆಯುವುದಿಲ್ಲ; ಇದು ಮಾತ್ರ ಸತ್ಯ. ಶೇಷಯ್ಯ ಶೆಟ್ಟರು ನನ್ನನ್ನೀ ತೊಂದರೆಗೀಡುಮಾಡಿದರು.—ಅವರೀಗ ನನ್ನನ್ನು ರಕ್ಷಿಸಲೇಬೇಕು."

"ಓಹೋ! ಮುದಿ ಶೇಷಯ್ಯನು ಇದಕ್ಕೆಲ್ಲಾ ಕಾರ ಣನೋ !!! "

"ನಾನೇ ಹಾಗೆಂದಿರುವುದರಿಂದ ಹಾಗಲ್ಲವೆಂದು ಹೇಳಿ ಫಲವಿಲ್ಲ. ನನಗೆ ಲೇಖನ ಸಾಮಗ್ರಿಗಳನ್ನೊದಗಿಸಿದರೆ ಅವರಿಗೊಮ್ಮೆ ಒಕ್ಕಣಿಸಿ ನೋಡುವೆನು. ಇದರಿಂದೇನೂ ತೊಂದರೆಯಂತೂ ಇಲ್ಲ."

"ಬರೆಯುವ ಪರಿಸ್ಥಿತಿಯು ಇಲ್ಲಿಲ್ಲ. ನನ್ನೊಡನೆ ಬಾ. ಕೆಲವು ಕಾಲದನಂತರ ನಿನ್ನನ್ನಿಲ್ಲಿಗೇ ಕರೆತರುವೆನು. ನೀನಿದನ್ನು ನಂಬು."

ವೀರಪ್ಪನು ನೆಲಮನೆಯಿಂದ ಹೊರಬಿದ್ದೊಡನೆಯೇ ಮೊದಲಿನಂತೆ ಬಾಗಿಲು ಭದ್ರಮಾಡಲ್ಪಟ್ಟಿತು. ಮುಂದವರು ಕಲ್ಲಿನ ಮೆಟ್ಟಿಲುಗಳನ್ನೇರಿ ಹಿಂಭಾಗದ ಕೊಳಕು ಕೋಣೆಯನ್ನು ಸೇರಿದರು. ವೀರಪ್ಪನು ಅಲ್ಲಿದ್ದ ಸಣ್ಣ ಕಿಡಕಿಯಲ್ಲಿಣಿಕಿ ನೋಡಿದರೂ ಇದು ವಿಜಯನಗರವೆಂಬ ಯೋಗ್ಯ ಗುರುತುಗಳಾವುವೂ ಕಂಡುಬರಲಿಲ್ಲ; ಅಥವಾ ಈ ಮನೆಯಿರುವ ಸ್ಥಳವನ್ನು ಗೊತ್ತುಪಡಿಸಲು ಸಹಾಯಕವಾಗುವಂತಹ ಗುಡಿಗುಂಡಾರ, ಗಿಡಗಳೇ ಮೊದಲಾದುವು ಗೋಚರಿಸಲಿಲ್ಲ.

ವೀರಪ್ಪನು ಬರೆಯುವುದಕ್ಕನುವಾದೊಡನೆಯೇ ಆ ನೀಚನು ನಿಧಾನವಾಗಿ ಈ ಕೆಳಗಿನಂತೆ ಹೇಳಿ ಬರೆಸಿದನು:

"ಪ್ರಿಯ ಧಣಿಗಳೇ,

"ನಾನಾರನ್ನು ಹಿಡಿಯಬೇಕೆಂದಿದ್ದೆನೋ ಅವರೇ ನನ್ನನ್ನೀಗ ಹಿಡಿದಿದ್ದಾರೆ. ನೆಲಮಾಳಿಗೆಯ ಸೆರೆಮನೆಯಲ್ಲಿ ನಾನಿದ್ದೇನೆ; ಇದೆಲ್ಲಿರುವುದೆಂಬ ಕಲ್ಪನೆಯು ಕನಸಿನಲ್ಲಿಯೂ ನನಗೆ ಬರುವಂತಿಲ್ಲ. ನನ್ನ ಬಿಡುಗಡೆಯ ಬೆಲೆಯು ಐದು ಸಾವಿರವಂತೆ; ಅದನ್ನು ಸಲ್ಲಿಸುವ ವರೆಗೂ ನನ್ನನ್ನಿವರು ಬಿಡುವುದಿಲ್ಲವಂತೆ. ಅವರಲ್ಲೊಬ್ಬನ ಹೇಳಿಕೆಯಂತೆ ನಾನೀಗ ಬರೆಯುತ್ತಿದ್ದೇನೆ. ನಾನೀಗ ತಮ್ಮಲ್ಲಿ ಬೇಡಿಕೊಳ್ಳುವುದೇನೆಂದರೆ ತಾವು ದಯವಿಟ್ಟು ಐದುಸಾವಿರ ನಗದು ರೂಪಾಯಿಗಳ ಚೀಲವೊಂದನ್ನು ಕಟ್ಟಿ, ನರರಕ್ಕಸಿಯು ನನ್ನನ್ನು

ಸಂದರ್ಶಿಸಿದ ಸೇತುವೆಯ ಸಂದಿಯಲ್ಲಿಡುವ ಕೃಪೆಮಾಡ ಬೇಕು. ಆ ಹಣವನ್ನು ಇತರರು ಮುಟ್ಟಲೆಂದೂ ಸಾಧ್ಯ ವಿಲ್ಲ. ಮುಂದೆ ಆರು ತಾಸಿನೊಳಗಾಗಿಯೇ ನನಗೆ ಬಿಡು ಗಡೆಯುಂಟಾಗುವುದು. ಕೂಡಲೇ ಕೃತಜ್ಞತೆಯನ್ನು ವ್ಯಕ್ತ ಪಡಿಸಲು ನಾನು ತಮ್ಮಲ್ಲಿಗೆ ಓಡಿಬರುವೆನು. ನೀವಾರೂ ನನ್ನಿರವನ್ನು ಕಂಡುಹಿಡಿದು, ಬಿಡಿಸಲು ಯತ್ನಿಸಬೇಡಿ; ಇದಕ್ಕೆ ಮೇಲಿನ ಪ್ರಾರ್ಥನೆಗೆ ಕಿವಿಗೊಡುವುದೊಂದೇ ದಾರಿಯು.

"ಇತಿ, ನಿಮ್ಮ ಸೇವಕನಾದ,
" ವೀರಪ್ಪ. "

ಕಳ್ಳನು ವೀರಪ್ಪನ ಭುಜದ ಮೇಲಿಂದಿಣಿಕಿ ನೋಡಿ ತಾನೆಂದುದು ಏನೂ ಹೆಚ್ಚುಕಡಿಮೆಯಿಲ್ಲದಂತೆ ಬರೆದಿರುವು ದೆಂದು ಮನಗಂಡು, " ಇದು ಬಹುಶಃ ಪರಿಣಾಮಕಾರಿ ಯಾಗಬಹುದು. ಕಳ್ಳರಲ್ಲಿಯೂ ಸಂಭಾವಿತ ಗುಣವಿರು ವುದರಿಂದ, ವೀರಪ್ಪಾ ಇಲ್ಲಿ ಕೇಳು, ಹಣವು ದೊರೆಯಿ ತೆಂದ ಕೂಡಲೇ ನಿನಗೆ ಸ್ವಾತಂತ್ರ್ಯವು ದೊರೆಯುವುದು " ಎನ್ನಲು ವೀರಪ್ಪನು ನಿಟ್ಟುಸಿರಿಟ್ಟು " ಪತ್ರವು ಪರಿಣಾಮ ಕಾರಿಯಾಗುವಂತಿದೆ " ಎಂದನು.

ಇಷ್ಟರಲ್ಲಿ ಸಮೀಪದಲ್ಲಿದ್ದ ಪೆಟ್ಟಿಗೆಯೊಂದರ ಮೇಲೆ ತುಕ್ಕುಹಿಡಿದ ಬಹುದೊಡ್ಡ ಅರವಿದ್ದುದನ್ನು ವೀರಪ್ಪನು ಕಂಡನು. ಕೂಡಲೇ ಅವನ ಮನಸ್ಸಿನಲ್ಲಿ ವಿಚಾರತರಂಗ ಗಳು ಉಕ್ಕೇರಿದುವು. ಇದಕ್ಕೂ ಬಹು ಭಯಂಕರವಾದ ಕಾರಾಗೃಹದಿಂದ ಇದಕ್ಕಿಂತಲೂ ಅತಿ ಕೀಳಾದ ಆಯುಧದ ಸಹಾಯದಿಂದ ಬಂದಿಗಳು ಬಿಡುಗಡೆಯನ್ನು ಪಡೆದ ಪರಿ

ಯನ್ನು ಅವನು ನೆನೆದನು.

"ನೀನೇನೂ ಅಂತಹ ದುರುಳನಂತಿಲ್ಲ. ನಿರಾತಂಕವಾಗಿ ಕೆಲಸವಾಗುವಂತೆ ನೀನು ನಡೆದುಕೊಂಡಿರುವೆ. ಇದಕ್ಕಾಗಿ ನಿನಗೇನಾದರೂ ಕೊಡಬೇಕು" ಎಂದು ಹೇಳಿ ಆ ಮನುಷ್ಯನು ಮೇಲಕ್ಕೆದ್ದು ಮಣ್ಣಿನಿಂದ ಮುಚ್ಚಿಹೋಗಿದ್ದ ಬಾಗಿಲುಮಾಡದ ಬಾಗಿಲನ್ನು ತೆರೆದು, ಕೆಲವು ತಿನಿಸುಗಳನ್ನು ತಂದು ಅವನಿಗಿತ್ತು, ಪುನಃ ವೀರಪ್ಪನನ್ನು ನೆಲಮನೆಯೊಳಕ್ಕೆ ಹೊಗಿಸಿ, ಮೊದಲಿನಂತೆಯೇ ಬಾಗಿಲನ್ನು ಭದ್ರಮಾಡಿ ಹೊರಟುಹೋದನು.

ಕೆಲಕಾಲದವರೆಗೆ ಇಬ್ಬರೂ ತಂದುದನ್ನು ಮೌನವಾಗಿ ತಿನ್ನಲಾರಂಭಿಸಿದರು. ಹಸಿವಡಗಿದ ಮರುಕ್ಷಣದಲ್ಲಿಯೇ ಮಾತಿನ ಮಲ್ಲನಾದ ವೀರಪ್ಪನು ಮೃತ್ಯುಂಜಯನೊಡನೆ ಮಾತನಾಡತೊಡಗಿದನು.

"ಮೃತ್ಯುಂಜಯರಾಯರೇ, ನೀವೆನ್ನುವುದೇನು? ಇಲ್ಲಿಂದ ತಪ್ಪಿಸಿಕೊಂಡು ಹೋಗುವುದು ಅಸಾಧ್ಯವೋ?"

"ತಪ್ಪಿಸಿಕೊಂಡು!! ಇಲ್ಲಿಂದ!!!"

"ಹುಶ್, ಇಲ್ಲಿಯ ಗೋಡೆಗಳಿಗೂ ಕಿವಿಯಿದೆ. ಮಧ್ಯದಲ್ಲಿ ಮಾತನಾಡದೆ ಲಕ್ಷ್ಯವಿಟ್ಟು ಕೇಳಿ. ನಾನು ಶೇಷಯ್ಯಶೆಟ್ಟರಿಗೆ ಪತ್ರಬರೆದಿದ್ದರೂ ಅವರೊಂದು ಕಾಸನ್ನು ಸಹ ಕೊಡುವುದಿಲ್ಲವೆಂಬುದನ್ನು ಬಲ್ಲೆ. ಒಂದು ವೇಳೆ ಕೊಟ್ಟರೂ ಅವರು ಪೂರ್ಣವಿಚಾರಮಾಡದೆ ಕಾರ್ಯವನ್ನೆಸಗುವವರಲ್ಲವಾದುದರಿಂದ, ಇನ್ನೂ ಬಹು ತಡವಾಗುವುದು. ಇಷ್ಟರಲ್ಲಿ ನನಗೆ ಇಲ್ಲಿಯ ಶೈತ್ಯದಿಂದ ಸಂಧಿವಾತವುಂಟಾಗಬಹುದು; ಅಥವಾ ಮನೋವ್ಯಾಕುಲದಿಂದ ಹುಚ್ಚು ಹಿಡಿಯ

ಬಹುದು. ಆದುದರಿಂದ ವಿಶ್ವಪ್ರಯತ್ನವನ್ನು ಮಾಡಿ ನಾನಿಲ್ಲಿಂದ ಓಡಿಹೋಗಬೇಕೆಂದು ನಿಶ್ಚೈಸಿದ್ದೇನೆ."

"ಆದರೆ ಅದು ಹೇಗೆ ಸಾಧ್ಯ? ಇಲ್ಲಿಯ ಗೋಡೆಬಾಗಿಲುಗಳು ಕಲ್ಲುಕಬ್ಬಿಣಗಳಿಗಿಂತಲೂ ಕರ್ಕಶವಾಗಿವೆ. ನಮ್ಮಲ್ಲಾದರೋ ಮೊಳೆಸೂಜಿಗಳು ಸಹ ಇಲ್ಲ."

"ಮೊಳೆಸೂಜಿಗಳು ನಮಗೆ ನಿರುಪಯುಕ್ತವಾದುದರಿಂದ ಅವುಗಳಿರದಿದ್ದರೇನೂ ಬಾಧಕವಿಲ್ಲ. ನಾನೊಂದು ಅರವನ್ನು ಮುಚ್ಚಿ ತಂದಿದ್ದೇನೆ. ಇಗೋ, ಕೈಸವರಿ ನೋಡಿ."

"ಆದರೆ ಚಿಲಕ, ಸರಪಣಿ, ಕೀಲಿಗಳು ಬಾಗಿಲಿನ ಹೊರಭಾಗದಲ್ಲಿವೆ. ಅರದಿಂದ ನಾವು ಉಜ್ಜಿದೊಡನೆಯೇ ಹೊರಭಾಗದಲ್ಲಿ ಬಹು ಸದ್ದಾಗುವುದು. ಇದಕ್ಕೇನು ಹೇಳುವೆ?"

"ಬಾಗಿಲಿನ ಹತ್ತಿರ ನಮಗಾವ ಕಾರ್ಯವೂ ಇಲ್ಲ. ನಾನು ಮೇಲೆ ಹೋದಾಗ ಬಹು ಜಾಗರೂಕನಾಗಿದ್ದೆ. ಈ ನೆಲಮಾಳಿಗೆಯು ಈ ಮೇಲ್ಭಾಗದ ಮನೆಯಷ್ಟೇ ವಿಸ್ತೃತವಾಗಿರುವುದೆಂಬುದನ್ನು ಪರೀಕ್ಷಿಸಿ ತರ್ಕಿಸಿರುವೆನು. ಒಂದು ವೇಳೆ ಮಗ್ಗುಲಲ್ಲಿ ಬೇರೊಂದು ನೆಲವನೆಯಿದ್ದರೆ ಅದು ಇನ್ನೊಂದು ಮನೆಗೆ ಸೇರಿರಬೇಕು. ನಾವೀಗ ಒರಗಿರುವ ಗೋಡೆಯನ್ನೊಡೆದು ಅದನ್ನು ಪ್ರವೇಶಿಸಿದರೆ, ಆ ಮನೆಯವರು ನಮಗೆ ವಿರೋಧಿಗಳಾಗಿರದ ಸಂಭವವಿದೆ. ಅಂತೂ ಪ್ರಯತ್ನವು ಕೈಕೊಳ್ಳತಕ್ಕಂತಹುದು."

"ಹಾಗಾದರೆ ಆಪದ್ಬಂಧುವೇ, ಈಗಲೇ ಕೊರೆಯುವ ಕಾರ್ಯವನ್ನು ಕೈಕೊಳ್ಳೋಣ. ಅನ್ನವನ್ನಿಕ್ಕುವವನು ದೀಪವಿಲ್ಲದೆ ಇಲ್ಲಿಗೆ ಬರುವುದೀಗ ನಮಗೆ ಹಿತವಾಯಿತು."

ಒಬ್ಬರನಂತರ ಮತ್ತೊಬ್ಬರು ಪಾಳಿಯ ಮೇಲೆ ಕೊರೆಯು

ಲಾರಂಭಿಸಿದರು. ಮಧ್ಯಾಹ್ನ ಸುಮಾರು ಎರಡು ಘಂಟೆಯ ಹೊತ್ತಿನಲ್ಲಿ ವೀರಪ್ಪನು ಗೋಡೆಯಿಂದ ಮೊದಲಕಲ್ಲನ್ನು ಹೊರತೆಗೆದನು. ಆದು ಊಟಕ್ಕೆ ತರುವ ಸಮಯವಾದುದರಿಂದ ಕೆಲಕಾಲ ಅವರು ಕೆಲಸವನ್ನು ನಿಲ್ಲಿಸಿದರು.

ಒಂದು ಕಲ್ಲನ್ನು ಹೊರತೆಗೆದನಂತರ ಮುಂದಿನ ಕೆಲಸವು ಸುಗಮವಾಯಿತು. ಸುಮಾರು ಸಂಜೆಯ ಏಳು ಘಂಟೆಯ ಹೊತ್ತಿಗೆ—ಇದುಮೃತ್ಯುಂಜಯನ ಅಂದಾಜು—ಗೋಡೆಯ ಹೊರಭಾಗದ ಪ್ರದೇಶವು ಪೊಳ್ಳಾಗಿರುವುದೆಂದು ಬಾರಿಸಿ ತಿಳಿದುಕೊಳ್ಳುವಷ್ಟರ ಮಟ್ಟಿಗೆ ಅಗೆಯುವ ಕಾರ್ಯವು ಯಶಸ್ವಿಯಾಯಿತು. ಇನ್ನೊಂದು ನೆಲವನೆಯಿದೆಯೆಂಬ ಕಲ್ಪನೆಯಿಂದ ಈ ದುರ್ದೈವಿಗಳ ಹುರುಪು ದ್ವಿಗುಣಿತವಾಯಿತು.

ಊಟವಾದನಂತರ ಇಬ್ಬರೂ ಪಾಳಿಯ ಮೇಲೆ ನಾಲ್ಕು ತಾಸುಗಳವರೆಗೆ ಕೈನೋವನ್ನು ಲೆಕ್ಕಿಸದೆ ಬಿಟ್ಟೂಬಿಡದೆ ಅಗೆದೇ ಅಗೆದರು. ಪ್ರಯತ್ನಕ್ಕೆ ತಕ್ಕ ಪ್ರತಿಫಲವು ದೊರೆಯಿತು. ಕೊರೆಯುವ ಕಾರ್ಯವು ಕೊನೆಗಂಡಿತು. ವೀರಪ್ಪನು ಮೊದಲು ಕಿಂಡಿಯಲ್ಲಿ ಕೈಹಾಕಿ ತಮ್ಮ ತರ್ಕವು ಸರಿಯೆಂದು ಮನಗಂಡು, ಒಂದೆರಡು ಕಲ್ಲುಗಳನ್ನುರುಳಿಸಿದೊಡನೆಯೇ ಕಿಂಡಿಯು ನುಸಿದುಹೋಗುವಷ್ಟು ದೊಡ್ಡದಾಯಿತು.

ಇಲ್ಲಿಯವರೆಗೂ ಮೃತ್ಯುಂಜಯನು ಇಲ್ಲಿಂದ ತಪ್ಪಿಸಿಕೊಳ್ಳುವುದೆಂಬುದು ಸಂಭವದ ಮೇರೆಯೊಳಗಿನ ಮಾತಲ್ಲವೆಂದು ನಂಬಿದ್ದನು. ನೀರಿನಲ್ಲಿ ಮುಳುಗುವ ನಿರಾಶೆಯುವನೊಬ್ಬನು ಕೈಗೆ ಸಿಕ್ಕ ಹುಲ್ಲನ್ನೇ ಆಧಾರವೆಂದು ಬಗೆಯುವ

ಬಗೆಯು ಇವನದಾಗಿತ್ತು. ಈಗ ವೀರಪ್ಪನು ನುಸುಳಿಬಾರಿನ್ನಲು, ದಂಡೆಯ ಮೇಲೆ ಸ್ಮೃತಿಬಂದಿದ್ದನಂತರ ಸಮಯದಲ್ಲಿ ಕೈಚಾಚಿ ಸಹಾಯಮಾಡಿದುದನ್ನರಿತವನಂತೆ ಮೃತ್ಯುಂಜಯನ ಮನಃಸ್ಥಿತಿಯಾಯಿತು.

ಮುಗ್ಗುಲಿನ ನೆಲವನೆಯನ್ನು ಸೇರಿದೊಡನೆಯೇ ಕ್ಷಣಕಾಲವಿಬ್ಬರೂ ಉಸಿರನ್ನೆಳೆದುಕೊಳ್ಳಲು ಮೌನವಾಗಿ ನಿಂತರು. ಈ ಸಲವೂ ವೀರಪ್ಪನೇ ಚಟುವಟಿಕೆಯನ್ನು ತೋರಿಸಿದನು. ನೆಲವನೆಯ ಬಾಗಿಲು ತೆರೆದಿರುವುದೆಂಬ ಮಾತು ಕಿವಿಯಲ್ಲಿ ಬಿದ್ದೊಡನೆಯೇ ಮೃತ್ಯುಂಜಯನಿಗೆ ಸ್ವರ್ಗವು ಸಿಕ್ಕಂತಾಯಿತು. ಮರುಕ್ಷಣದಲ್ಲಿಯೇ ತಾವು ಹೊರಬಿದ್ದೊಡನೆ ತಮ್ಮ ವೈರಿಗಳಲ್ಲೊಬ್ಬರ ಕಣ್ಣಿಗೆ ಬೀಳಬಹುದೆಂಬ ಭಯಾನಕ ಕಲ್ಪನೆಯು ಹೊಳೆಯಲು ಇಬ್ಬರೂ ಭ್ರಂಶಚಿತ್ತರಾದರೂ ಕೊನೆಯಲ್ಲಿ ಗತ್ಯಂತರವಿಲ್ಲದೆ ಸಾವು ಅಥವಾ ದಂಡದಿಂದ ವಿರೋಧಿಗಳನ್ನೆದುರಿಸಬೇಕೆಂದು ನಿಶ್ಚಯಿಸಿಕೊಂಡರು.

ವೀರಪ್ಪನು ಸಾಧ್ಯವಾದಷ್ಟು ಹಗುರಾಗಿ, ನಿಶ್ಶಬ್ದವಾಗಿ, ಬಹು ಎಚ್ಚರದಿಂದ ನೆಲವನೆಯ ಬಾಗಿಲನ್ನು ತೆರೆದನು. ಮುಂಭಾಗದಲ್ಲೊಂದು ಅಟ್ಟದ ಮೆಟ್ಟಲು ಕೈಗೆ ಸಿಕ್ಕಲು ಅವನು ಅದನ್ನೇರಿಹೋದನು; ಮೃತ್ಯುಂಜಯನು ಅವನನ್ನು ಹಿಂಬಾಲಿಸಿದನು.

ಇಷ್ಟಾದರೂ ಎಲ್ಲೆಲ್ಲಿಯೂ ಕತ್ತಲೆಯೂ ಮೌನವೂ ಮನೆ ಮಾಡಿದ್ದುವು!!

ಅವರು ಮಹಡಿಗೇರಿ ಬಂದನಂತರ ಆ ದೊಡ್ಡಮನೆಯ ಅದಾವುದೋ ಒಂದು ಭಾಗದಿಂದ ದೀಪದ ಒಂದೆರಡು

ಕಿರಣಗಳು ಹೊರಹೊರಟುಬಂದುವು. ಇದರಿಂದ ಆ ವ್ಯಕ್ತಿಗಳು ಪರಸ್ಪರರನ್ನು ಕಂಡುಕೊಳ್ಳಲಾಗದಿದ್ದರೂ ಮುಂದೆಲ್ಲಿ ಹೋಗಬೇಕೆನ್ನುವ ಅವರ ಕಲ್ಪನೆಯು ಕುಂಠಿಸದಂತಾಯಿತು. ಅವರು ಬಹು ನಿಧಾನವಾಗಿ ನಡೆಯುತ್ತಾ ಸುಮಾರು ಹತ್ತು ಮಾರು ದೂರವನ್ನು ಹತ್ತು ನಿಮಿಷಗಳಲ್ಲಿ ಕ್ರಮಿಸಿ ಮನೆಯ ಮುಂಭಾಗವನ್ನು ಸೇರಿದರು.

ಬಾಗಿಲಿಗೆ ಬೀಗವು ಬಿದ್ದಿದ್ದರೂ ಅವರಲ್ಲಿಯೇ ಕೀಲಿಯ ಕೈಯಿತ್ತು. ಅಂತಹ ಅಪರಾತ್ರಿಯಲ್ಲಿಷ್ಟು ಸದ್ದಾಗದಂತೆ ಬಾಗಿಲನ್ನು ತೆರೆಯುವುದು ಸಾಮಾನ್ಯವಾದ ಮಾತಲ್ಲ. ಇದಲ್ಲದೆ ಒಂದು ಕೂದಲೆಳೆಯಷ್ಟು ಸರಿಸಿದರೂ ಸಹ ಆ ಬಾಗಿಲು ಭಯಂಕರ ಗರ್ಜನೆಯನ್ನು ಮಾಡಿಬಿಡುತ್ತಿತ್ತು. ಸುಮಾರು ೧೫ ನಿಮಿಷಗಳನ್ನು ವ್ಯರ್ಥಮಾಡಿದ ಮೇಲೆ ಈ ಮಹಾಕಾರ್ಯವು ಕೈಗೂಡಿತು!!

ತಾನೂ ತನ್ನ ಅನುಯಾಯಿಯೂ ಕೂಡಿ ಹೊರಬಿದ್ದರೆ ಅಲ್ಲಲ್ಲಿ ಅಡಗಿರುವ ಆ ಕಳ್ಳರ ಗುಂಪಿನವರು ಸಂಶಯ ಪಡಬಹುದೆಂದು ವೀರಪ್ಪನಿಗೀಗ ಹೊಳೆಯಿತು. ಆದರೆ ಬಹು ಪ್ರತಿಧ್ವನಿಸುವ ಆ ಸ್ಥಳದಲ್ಲಿ, ಅಂತಹ ಪ್ರಶಾಂತ ನಿಶಿಯಲ್ಲಿ ಪಿಸುವಾತಿನಲ್ಲಿದನ್ನು ನುಡಿಯಲು ಸಹ ವೀರಪ್ಪನಿಗೆ ಎದೆಯಾಗಲಿಲ್ಲ. ಒಂದು ವೇಳೆ ಏನೂ ಹೇಳದೆ ತಾನು ಮಾತ್ರ ಹೊರಬಿದ್ದರೆ, ಮೃತ್ಯುಂಜಯನು ದೂರ ದೃಷ್ಟಿಯುಳ್ಳವನಾಗಿ ಕೆಲಕಾಲ ತಡೆದು ನಿಲ್ಲದೆ ಹೊರಬರಬಹುದು. ಆದುದರಿಂದ ಅವನೊಂದು ಹಂಚಿಕೆಯನ್ನು ಕಲ್ಪಿಸಿದನು.

ಬಾಗಿಲನ್ನು ತೆರೆದೊಡನೆಯೇ ಮೃತ್ಯುಂಜಯನನ್ನು ವೀರ

ಪ್ಪನು ಮೆಲ್ಲನೆ ಮುಂದೆ ದೂಡಿದನು. ಅವನು ಆದರಂತೆಯೇ ಮೆಲ್ಲಗೆ ಹೊರಗೆ ಬರಲು, ಬಾಗಿಲು ಪುನಃ ಮುಚ್ಚಲ್ಪಟ್ಟಿತು.

ಕೂಡಲೇ ಭಯಭ್ರಾಂತನಾದ ವೀರಪ್ಪನಿಗೆ ನಿರ್ಜನ ಗವಿಯಂತಿರುವ ಮಹಡಿಯಿಂದ ಕೊರಗುವ ದನಿಯು ಬಂದು ಕೇಳಿತು. ಅವನು ಹೆದರಿಕೆಯಿಂದೋಡಿಹೋಗದೆ ಲಕ್ಷ್ಯವಿಟ್ಟು ಕೇಳಿದನು. ಏನೋ ಅಪಘಾತದಿಂದ ಮನೆಯಲ್ಲಿದ್ದ ಹುಯಿಲಿನಂತಲ್ಲದೆ, ಶಾರೀರಿಕ ಅಥವಾ ಮಾನಸಿಕ ಬಲು ನೋವಿನಿಂದ ಅದು ಜನಿಸಿದಂತೆ ತೋರಿತು. ಆ ದನಿಯು ಪುನಃ ಪುನಃ ಕೇಳಿಬಂದು ಮುಂದುವರಿದಿತು. ಪರಿಶೋಧಕ ಮತಿಯಾದ ವೀರಪ್ಪನು ತನ್ನ ಕೌತುಕವನ್ನಿಂಗಿಸಲು ನಿದಾನವಾಗಿ ಈ ಸಲವೂ ಮೇಲಕ್ಕೇರಿ ಹೋದಹೋದಂತೆ ಆ ದನಿಯು ಹೆಚ್ಚು ಸ್ಪಷ್ಟವಾಯಿತು. "ಇದು ಅಯ್ಯೋ ಭೀಕರ-ಬಹು ಭಯಂಕರ!—ಕೈ ಬಿಡಬಹುದೇ-ಸಾಯಲೆಂದು ತೊರೆಯಬೇಕೇ—ಸಾಯುವಾಗ ನಾನೊಬ್ಬನೇ—ಅಪ್ಪಾ, ಅಯ್ಯೋ, ಒಬ್ಬನೇ,—ದಿಕ್ಕಿಲ್ಲದೆ- ಗುಟುಕುನೀರು-ಒಂದೇ ಗುಟುಕು-ದೇವರೇ, ದೇವರೇ"—ಎಂಬ ಶಬ್ದಗಳು ಕೇಳಿಸಲು ತಾನೀಗ ಗಂಡಾಂತರಕ್ಕೀಡಾಗುವ ಸಂಭವವಿಲ್ಲವೆಂದು ಮನಗಂಡು ವೀರಪ್ಪನು ದೀಪವು ಮಿಣುಗುಟ್ಟುತ್ತಿದ್ದ ಕೋಣೆಯ ಬಳಿಗೆ ಬಂದು ನಿದಾನವಾಗಿ ಬಾಗಿಲನ್ನು ತೆರೆದನು.

ಅದೆಂತಹ ದೃಶ್ಯವದು!! ವೀರಪ್ಪನ ಮೈ ಜುಮ್ಮೆಂದಿತು!!

ಒಂದು ಹೊಲಸು ಹಾಸಿಗೆಯ ಮೇಲೆ ಹೆಣದಂತೆ ನಿಸ್ತೇಜನಾದ ಮುದುಕನೊಬ್ಬನು ಬಿದ್ದಿದ್ದನು. ಚರ್ಮದಿಂದ ಮುಚ್ಚಲ್ಪಟ್ಟ ಅವನ ಅಸ್ಥಿಪಂಜರದ ಭೀಕರತೆಗೆ ಬಲು ಬೆಳೆದ ಗಡ್ಡಮೀಸೆಗಳು ಹೆಚ್ಚು ಭಯಂಕರ ಸ್ವರೂಪವನ್ನಿ

ತ್ತುವು. ಹೊರಳುವ ತಲೆಯ ಕೆಳಗೆ ಸೊರಗಿದ ಕೈಯೊಂದಿತ್ತು; ಇನ್ನೊಂದು ನೋವನ್ನು ಸಹಿಸಲಾರದೆ ಹೊದಿಕೆಯನ್ನು ಹಿಚುಕುತ್ತಿತ್ತು.

ಕೋಣೆಯಲ್ಲಿ ಭೂಷಣಪ್ರಾಯವಾದ ಸಾಮಾನುಗಳಿಲ್ಲದಿರಲಿಲ್ಲ; ಆದರೆ ಎಲ್ಲೆಲ್ಲಿಯೂ ಔದಾಸೀನ್ಯಭಾವವು ವ್ಯೈದೋರಿತ್ತು. ಮೇಜು ಕುರ್ಚಿಗಳ ಮೇಲೆ ಬಹು ದೂಳಿತ್ತು; ಕಪಾಟು ತೆರೆದಿತ್ತು; ನೆಲದಮೇಲೆ ನಾಣ್ಯಗಳು ಬಿದ್ದಿದ್ದುವು; ಜಮಖಾನೆಯು ಬಹು ಮಡಿಚಿತ್ತು.

ವೀರಪ್ಪನು ಮಂದಪ್ರಕಾಶವುಳ್ಳ ದೀಪವನ್ನೆತ್ತಿಹಿಡಿದು ಮುಂದೆ ಬಂದೊಡನೆ ಆ ರೋಗಿಯ ಮುಖದಲ್ಲಿ ಅಂತಹ ಅವಸ್ಥೆಯಲ್ಲಿಯೂ ಕಿರುನಗೆಯು ಬರಲು ಯತ್ನಿಸಿತು. ಆ ದುರ್ದೈವಿಗೆ ನೀರನ್ನು ಕುಡಿಸುವುದು ವೀರಪ್ಪನ ಮೊದಲ ಕೆಲಸವೆನಿಸಲು, ಬಟ್ಟಲಿನಲ್ಲದನ್ನು ಸುರುವಿ, ಅವನನ್ನೆತ್ತಿ ಕೂರಿಸಿ, ಸ್ವಲ್ಪಸ್ವಲ್ಪವಾಗಿ ನೀರನ್ನು ಕುಡಿಸಿದನು. ಬಟ್ಟಲು ಬರಿದಾಯಿತು; ರೋಗಿಯು ಹಾಸಿಗೆಯ ಮೇಲುರುಳಿಕೊಂಡನು. ಅವನ ದೃಷ್ಟಿಯೇ ಕೃತಜ್ಞತೆಯನ್ನು ವ್ಯಕ್ತಗೊಳಿಸಿತು. ವೀರಪ್ಪನೆಂದನು:—

"ಸಜ್ಜನನೇ, ಇನ್ನೇನು ಬೇಕಾದರೂ ಹೇಳು. ನಿನಗೆ ಅತ್ಯಂತ ಜಡ್ಡಾದಂತಿದೆ-ಆದರೆ ಇಲ್ಲಾರೂ ಇದ್ದಂತಿಲ್ಲ—"

"ಅಹುದು-ಅಹುದು-ನಾನೀಗ ಒಬ್ಬೊಂಟಿಗ. ಅಯ್ಯೋ ಕೃತಘ್ನಳೇ, ನೀನೆಲ್ಲಿ? ನಿನ್ನ ಸ್ವಂತ ತಂದೆಯನ್ನು—ಸುಂದರೀ, ಸುಂದರೀ,—ಇಷ್ಟು ಹೊತ್ತು—"

"ನಿನಗೆ ಹಸಿವೆಯೋ? ತಿನ್ನಲಿಕ್ಕೇನು ಕೊಡಲಿ?"

"ಅಯ್ಯೋ, ಅಪ್ಪಾ, ನನಗೆ ಹಸಿವೆಯಿಲ್ಲ—ನನ್ನ ಅಂತ್ಯಕಾಲವಿದು."

"ಹಾಗಾದರೆ ನಾನೀಗ ಓಡಿಹೋಗಿ ವೈದ್ಯನೊಬ್ಬನನ್ನು ಕರೆತರು--"

"ಬೇಡ ಬೇಡ, ದಯಮಾಡಿ ನಿಲ್ಲು. ಬದುಕುವ ಆಶೆಯಿನ್ನಿಲ್ಲ; ಮನುಜಸಹಾಯವು ನನಗೆ ಸಾಕಾಗುವಂತಿಲ್ಲ. ನಾನು--ತೀರಿಕೊಂಡ ಮೇಲೆ....ಇಗೋ ಹೆಚ್ಚು ಹೇಳಲಾರೆ. ಧ್ವನಿಯು ನನ್ನನ್ನು ತೊರೆಯುತ್ತಿದೆ; ಕಣ್ಣು ಮಂದವೆನಿಸುತ್ತಿದೆ. ಅಯ್ಯೋ ಇತ್ತ ಬಾ. ದೀಪವನ್ನೇಕೆ ಆರಿಸಿದೆ?"

"ಇಗೋ ನಾನಿಲ್ಲಿಯೇ ಹತ್ತಿರದಲ್ಲಿದ್ದೇನೆ; ದೀಪವಾರಿಲ್ಲ. ನೀನು ಹೇಳು. ನನ್ನಲ್ಲಿ ನಂಬಿಕೆಯಿಟ್ಟು ಹೇಳಬೇಕೆಂದಿರುವುದೆಲ್ಲವನ್ನೂ ಹೇಳಿಬಿಡು. ನಾನು ಬಗ್ಗಲೋ, ಇಗೋ ಬಗ್ಗಿದ್ದೇನೆ."

"ಇನ್ನೂ ಬಗ್ಗು. ನನ್ನ ಕಿಸೆಯಲ್ಲಿಯ ಪುಸ್ತಕ—ಹಾ! ಹೂ, ಸುಂದರಿಗೆ ಹೇಳು--ಸತ್ತೆ, ಅಯ್ಯೋ ಸತ್ತೆ-ದೇವರೇ, ಉಳಿಸು—ಕ್ಷಮಿಸು—ಮನೋರಮೆ—ಸುಂದರಿ—"

ಅಪರಿಚಿತನು ಪರಲೋಕವನ್ನು ಸೇರಿದನು!

ವೀರಪ್ಪನು ಕಡುನಡುಗಿದನು. ತನ್ನ ಕಣ್ಣೆದುರಿಗಿನ ಅಂತಕನ ಕೋಲಾಹಲವೂ ಸಂದರ್ಭವಶದಿಂದ ತಾನಿಲ್ಲಿಗೆ ಬಂದಿರುವ ಭಯಂಕರ ಸ್ಥಿತಿಯೂ ಅವನನ್ನು ಕಂಗೆಡಿಸಿ ಬಲು ತೊಳಲಿಸಿದುವು. ಕೆಲವು ತಾಸುಗಳ ನಂತರ ಅವನು ಚೇತರಿಸಿಕೊಂಡೆದ್ದು ಗೋಡೆಗೆ ಹಾಕಿದ್ದ ಅಂಗಿಯಲ್ಲಿಯ ಪುಸ್ತಕವನ್ನು ತೆಗೆದುಕೊಂಡು ಯಾರೋ ಬೆನ್ನಟ್ಟಿ ಬಂದಿರುವರೆಂಬಂತೆ ದಿಕ್ಕುತೋಚದೆ ಧಡಧಡನೆ ಮೆಟ್ಟಲುಗಳನಿಳಿದು ಓಡಿಹೋದನು. ಆಗ ಬೆಳಗುಮುಂಜಾವಿನ ಎರಡು ಗಂಟೆಯಾಗಿತ್ತು.

# ಕೌತುಕಮಯ ಕಾಗದಗಳು

ವೀರಪ್ಪನು ಇಂದ್ರಭವನವನ್ನು ಸೇರುವ ಸಮಯದಲ್ಲಿ ಮಹಾನಗರದ ಸಹಸ್ರಾರು ಗಡಿಯಾರಗಳು ಬೆಳಗು ಮುಂಜಾವಿನ ಐದು ಗಂಟೆಯಾಯಿತೆಂದು ಏಕ ಕಾಲದಲ್ಲಿ ಗರ್ಜಿಸಿದುವು. ಅತಿ ಆಯಾಸದಿಂದ ಬಹು ಬಳಲಿದ ಅವನ ಅವಯವಗಳು ತಾವೇತಾವಾಗಿ ವಿರಮಿಸಿ ಕೊಳ್ಳಲು ಯತ್ನಿಸಿದರೂ, ವೀರಪ್ಪನ ಇಚ್ಛಾಶಕ್ತಿಯು ಅವು ಗಳ ಸ್ವೇಚ್ಛಾಕಾರ್ಯಕ್ಕೆ ಎಡೆಗೊಡಲಿಲ್ಲ. ವಿಚಿತ್ರತಮ ರೀತಿ ಯಲ್ಲಿ ಪುಟ್ಟ ಪುಸ್ತಕವೊಂದು ಹಸ್ತಗತವಾಗಿರಲು ಅದನ್ನು ಪರೀಕ್ಷಿಸಲು ಅವನು ಉತ್ಕಂಠಿತನಾಗಿದ್ದನು.

ಅದು ಅತ್ಯಂತ ಹಳೆಯ ಲಡ್ಡು ಪುಸ್ತಕವಾಗಿತ್ತು. ಅದರ ಮೇಲೆ ಕಲೆಗಳು ಬಿದ್ದಿದ್ದವಲ್ಲದೆ ಕೆಲವು ಹಾಳೆಗಳ ತುದಿಗಳು ಮಡಚಿಯೂ ಹರಿದೂ ಹೋಗಿದ್ದುವು. ಜೀರ್ಣವಾದ ಮೇಲಿನ ರಟ್ಟಿನ ಬಣ್ಣವು ತಿಳಿಯಲಸಾಧ್ಯವಾಗಿತ್ತು. ಅದನ್ನು ತೆರೆದಿಟ್ಟುಕೊಂಡು, ಅದರಲ್ಲಿಯ ಸ್ಪಷ್ಟಾಕ್ಷರವುಳ್ಳ ಪ್ರತಿ ಕಾಗದವನ್ನೂ ವೀರಪ್ಪನು ಪರೀಕ್ಷಿಸತೊಡಗಿದನು.

ಮೊದಲಿನದೊಂದು ಮೃದುವಾದ ಚೀಲವಾಗಿತ್ತು. ವೀರ ಪ್ಪನು ನಿದಾನವಾಗಿ ಆ ಕಾಗದದ ಚೀಲದಿಂದ ಕಪ್ಪಾದ ಸುಮಾರು ಎರಡು ಮೊಳ ಉದ್ದವಾದ, ರೇಶಿಮೆಯ ಎಳೆ ಗಿಂತಲೂ ಮೃದುವಾದ ಕೂದಲುಗಳ ಗೊಂಚಲನ್ನು ಹೊರ ತೆಗೆದನು. ಅವನಿಗೆ ಮಿತಿಮೀರಿದ ವಿಸ್ಮಯವಾಯಿತು. ಅದನ್ನು ಮಡಿಸಿಟ್ಟ ಕಾಗದದ ಮೇಲೆ "ನೆನಪಿಗಾಗಿ ಮನೋ ರಮೆಯ ಕೂದಲೆಳೆಗಳು— ಪ್ರೇಮಪಾತ್ರನ ಸನ್ನಿಧಿಗೆ—

೧೭೫೬, ೧೨ನೆಯ ತಿಂಗಳು " ಎಂದು ಬರೆದಿತ್ತು.

ಆಶ್ಚರಿಯಿಂದವನು ಬೆಚ್ಚಿಬಿದ್ದನು. ಅವನಿಗೇನೋ ಹೊಳೆದಂತಾಯಿತು. ಇಂದ್ರಭವನವೆಂಬ ಭೋಜನಾಲಯದಲ್ಲಿ ನಾವು ವೀರಪ್ಪನ ಪರಿಚಯವನ್ನು ಮಾಡಿಕೊಟ್ಟಾಗ ಮನೋರಮೆಯ ಸುದ್ದಿಯನ್ನು ಅವನೆತ್ತಿದುದು ನಮ್ಮ ವಾಚಕರ ಸ್ಮೃತಿಪಥದಲ್ಲಿರಬಹುದು. ಮೊದಲೇ ಕುತೂಹಲಿಯಾದ ಇವನು ಈಗ ಕಂಗೆಡುವಷ್ಟು ಉತ್ಕಂಠಿತನಾಗಿ ಉಳಿದ ಕಾಗದಗಳನ್ನು ಚರ್ಚಿಸಿ ತಿಳಿಯಲಾರಂಭಿಸಿದನು. ಅವುಗಳಲ್ಲೊಂದು ಮಸಕಾದ ಬರೆವಣಿಗೆಯುಳ್ಳ ಅರ್ಧ ಪತ್ರವಿತ್ತು. ಇನ್ನರ್ಧವು ಏನು ಮಾಡಿದರೂ ಸಿಕ್ಕಲಿಲ್ಲ. ಅದರಲ್ಲಿನ ಒಕ್ಕಣೆಯು ಇಂತಿತ್ತು:—

" ನಾನು ಈ ಮೂಲಕ ಮುಖ್ಯವಾಗಿ ಇದ
ಮನಃಪೂರ್ವಕವಾಗಿ ತಿಳಿಯ ಪಡಿಸುವು
ಪುತ್ರನಾದ ಕೃಷ್ಣರಾಯನು ಸರ್ವಾಂತ
ಕೊಳ್ಳುವುದೇನೆಂದರೆ ಇಂದಿನಿಂದ ಮನೋ
ಪ್ರೀತಿಸುವೆನೋ ಅಷ್ಟೇ ನನ್ನಲ್ಲಿ ಅ
ವ—ಅವಳನ್ನು ಮಹಾರಾಜರು
ಮಾಡಿದೊಡನೆಯೇ, ಹಾಗಾಗದಿದ್ದ
ಯೇ ನಿಸ್ಸಂಶಯವಾಗಿ ಇವಳನ್ನು ಪ
ಕವಾಗಿ ವಾಗ್ದಾನವಿತ್ತು ಇದನ್ನು ಓ
ಕೆಳಗೆ ಸಹಿ ಮಾಡಿದ ಮಹಾನುಭಾವ

" ಸಾಕ್ಷಿ

" ಪದ್ಮನಾಭರಾಯ.

ಇವನಿಗಾದ ಆಶಾಭಂಗವೂ ವಿಷಾದವೂ ವರ್ಣನಾತೀತ

ವಾಗಿತ್ತು. ಒಂದು ವೇಳೆ ಪತ್ರದ ಇನ್ನೊಂದು ಭಾಗವೂ ಸಿಕ್ಕಿದ್ದರೆ ವಿಜಯನಗರದ ರಾಜಗೃಹದ ಒಂದು ರಹಸ್ಯ ಸ್ಫೋಟನವಾಗುತ್ತಿದ್ದಿತೆಂದು ಅವನು ತಿಳಿದನು. ಮೃತ್ಯುಂಜಯನ ತಂದೆಯಾದ-ಮತ್ತು ಈಗ ಪರಲೋಕವಾಸಿಯಾದ-ಪದ್ಮನಾಭರಾಯನು ಇದಕ್ಕೆ ಸಾಕ್ಷಿಯಾಗಿರುವುದರಿಂದ ಮೃತ್ಯುಂಜಯನ ಜನನದ ಗೂಢಕ್ಕೆ ಸಂಬಂಧಿಸಿದ ಹಳೆಯ ಕೇಳಿಕೆಯ ಮಾತುಗಳಿಗೆ ಬೆಂಬಲವಿಲ್ಲದಿಲ್ಲೆಂದು ವೀರಪ್ಪನು ಭಾವಿಸಿದನು. ಅಂತೂ ಮನೋರಮೆಯ ಮನೆತನಕ್ಕೆ ಸಂಬಂಧಿಸಿದ—ಉಪಯೋಗಕಾರಿಯಲ್ಲದಿದ್ದರೂ—ಸ್ವಾರಸ್ಯಮಯವಾದ ಮಹತ್ವದ ದಾಖಲೆಯು ಅವನಿಗೆ ದೊರಕಿತೆಂಬುದು ಮಾತ್ರ ದಿಟವು. ಈ ಪುಟ್ಟ ಪುಸ್ತಕವನ್ನು ಕೊಟ್ಟ ಆ ವೃದ್ಧನಾರೆಂದು ವೀರಪ್ಪನು ಆಶ್ಚರ್ಯಪಡಲಾರಂಭಿಸಿದನು.

ವೀರಪ್ಪನು ಅದನ್ನಲ್ಲಿಗೇ ಬಿಟ್ಟುಕೊಟ್ಟು ಈ ಒಗಟವನ್ನು ಒಡಚುವಂತಹ ಇತರ ಪತ್ರಗಳಿರುವುವೇನೆಂದು ಹುಡುಕತೊಡಗಿದನು. ಮತ್ತೊಂದು ಅತಿ ಜೀರ್ಣವಾದ-ಆದರೂ ಸ್ಫುಟವಾದ ಅಕ್ಷರಗಳುಳ್ಳ-ಚಿಕ್ಕದೊಂದು ಓಲೆಯ ಒಕ್ಕಣೆಯು ಹೀಗಿತ್ತು:—

೯—೨—೧೭೫೭

"ಪ್ರಿಯ ರಾಜಪುತ್ರರಿಗೆ,

"ನಿಮ್ಮ ರಾಜಪುತ್ರತ್ವವನ್ನು ಪ್ರಕಟಪಡಿಸಿರುವ ಕಾಗದವು ಕೈಸೇರಿತು. ನನಗಾಶ್ಚರ್ಯವಾಗಿದೆ—ಗಾಬರಿಯಾಗಿದೆ-ಎಚ್ಚರದಪ್ಪಿದೆ. ಕಲ್ಪನೆಯು ಕುಂಠಿಸಿರಲು, ಬುದ್ಧಿಯು ಬುದ್ಧಿಹೀನವಾಗಿರಲು, ಯಾಂತ್ರಿಕ

ರೀತಿಯಲ್ಲಿ ಈ ಪತ್ರವನ್ನು ಬರೆಯುತ್ತಿದ್ದೇನೆ. ಇದೇಕೆ-? ನಿನ್ನ ದಿವ್ಯಪ್ರೇಮವೊಂದನ್ನುಳಿದು ಸಕಲವೂ ಪ್ರಶಾಂತವಾಗಿರುವುದೇಕೆ?

“ನಿಮ್ಮವನಾದ,
“ಮ—ಮ”

ಇದರ ನಂತರ ಮತ್ತೊಂದು ಪತ್ರದ ಬರೆವಣಿಗೆಯು ಚಲುವೆಯೊಬ್ಬಳದೆಂದು ನೋಡಿದೊಡನೆಯೇ ವೀರಪ್ಪನರಿತನು. ಓದಿದನಂತರ ನಿಜಸ್ಥಿತಿಯೂ ಹಾಗೆಯೇ ಇತ್ತು. ಎರಡನೆಯ ಕಾಗದದಲ್ಲಿ ಅವನಲ್ಲಿ ತನಗಿರುವ ನಂಬಿಗೆಯನ್ನು ಅವಳು ಸ್ಪಷ್ಟಪಡಿಸಿ, ಗೊತ್ತಾದ ಸ್ಥಳಕ್ಕೆ ತಾನು ಬರುವುದಾಗಿ ಭರವಸೆಯನ್ನು ಕೊಟ್ಟಿದ್ದಳು. ಮನೋರಮೆಯ ಈ ಕೆಳಗಿನ ಪತ್ರವೊಂದು ನಂತರ ದೊರೆಯಿತು:—

“ನನ್ನ ಪ್ರಿಯ ರಾಜಕುಮಾರರೇ—ನನ್ನ ಪರಮ ಪ್ರೇಮಿಯಾದ ಪತಿಗಳೇ—ಈ ಪತ್ರದಿಂದ ನಿಮಗಾನಂದವಾಗುವುದು. ನಾನೀಗ ತಾಯಿತನವನ್ನೈದುವ ಸ್ಥಿತಿಯಲ್ಲಿದ್ದೇನೆ; ನಮ್ಮಿಬ್ಬರ ಅಗಾಧಪ್ರೇಮದ ಗುರುತೊಂದನ್ನು ಪಡೆದು ಶೀಘ್ರದಲ್ಲಿಯೇ ನಿಮಗರ್ಪಿಸುತ್ತೇನೆ. ಯಮುನೆಯೀಗ ನನ್ನ ಬಳಿಯಲ್ಲಿರುವುದು ಬಹು ಹಿತಾವಹವಾಗಿದೆ. ಅವಳು ಬಹು ಆಗ್ರಹವನ್ನು ಮಾಡುತ್ತಿರುವುದರಿಂದ ಈ ದಿನ ವಿಜಯಪುರದ ಸಮೀಪದಲ್ಲಿಯ ಅವರ ಗ್ರಾಮಕ್ಕೆ ಹೋಗದಿರಲಾರೆನು. ನೀವು ಪಟ್ಟಣಕ್ಕೆ ಹಿಂದಿರುಗುವ ಹೊತ್ತಿಗೆ, ನಿಮ್ಮ ಸೂಚನೆಯಂತೆ ನಾನಲ್ಲಿಗೆ ಬಂದಿರುವೆನು. ಆದರೂ ಈ ಪತ್ರವನ್ನು ಕೊನೆಗಾಣಿಸುವ ಮೊದಲು ನಿಮ್ಮೆಲ್ಲ ಪತ್ರಗಳನ್ನೂ—ಮುಖ್ಯವಾಗಿ ಹಿಂದಿನವೆರಡನ್ನೂ—ಪ್ರತಿದಿನವೂ ಮುದ್ದಿಡುವೆನೆಂದು ಹೇಳದಿರಲಾರೆನು.

೨೩-೬-೧೭೫೭ "ಇತಿ, ನಿಮ್ಮ ಪತ್ನಿಯಾದ,

"ಮನೋರಮೆ"

ಮೃತ್ಯುಂಜಯನ ತಾಯಿಯ ಹೆಸರನ್ನೋದಿ ವೀರಪ್ಪನು ಚಕಿತನಾದನು. ಇದಲ್ಲದೆ ಈ ಪತ್ರದಿಂದ ಮನೋರಮೆ ಕೃಷ್ಣರಾಯರ ವಿವಾಹವಾದುದು ಸತ್ಯವೆಂದಾಯಿತು. ಇದು ಬಹುಶಃ ೯-೨-೧೭೫೭ ಮತ್ತು ೨೩-೬-೧೭೫೭ ಇವುಗಳ ಮಧ್ಯಕಾಲದಲ್ಲಿ ಜರುಗಿರಬೇಕೆಂದು ಅವನು ತರ್ಕಿಸಿದನು. ಮುಂದೊಂದು ಪತ್ರವಿತ್ತು:—

೬-೧-೧೭೫೮

"ದುಃಖಾತಿರೇಕದಿಂದ ಮೂಕಳಾಗಿರುವೆನು, ಮೈಮರೆತಿರುವೆನು, ಕಂಗೆಟ್ಟಿರುವೆನು. ವಿಜಯಪುರದ ಸಮೀಪಕ್ಕೆ ಬಂದಾಗ ರಾತ್ರಿ ಹನ್ನೊಂದು ಹೊಡೆಯಿತು. ದೇವರೇ, ನನ್ನ ಗತಿಯು ಇಷ್ಟು ಕೀಳಾಗಬೇಕೇ !! ನೀವು ನನ್ನನ್ನು ಪ್ರೀತಿಸಲಿಲ್ಲ-ಎಂದೆಂದೂ ಇಲ್ಲ, ನನಗೀಗ ತಿಳಿಯುತ್ತದೆ. ಹಾಗಾದರೆ ಇಂತಹ ಕ್ರೂರ ಬೇರ್ಪಡೆಯೇಕಾಯಿತು? ಗರ್ಭಿಣಿಯಾದ ನಿನ್ನ ಪತ್ನಿಯಲ್ಲಿ ನಿನಗೇ ಕರುಣೆಯಿಲ್ಲವೇ? ನನ್ನ ತಲೆಯು ಕಾದಿದೆ, ಕಣ್ಣು ಮಸಕಾಗಿದೆ, ಏನು ಬರೆಯಬೇಕೆಂಬುದು ತಿಳಿಯಲೊಲ್ಲದು! ಇನ್ನಾದರೂ, ಪತಿಯೇ, ಪತ್ರಬರೆ—ಊಹೂ ಹಾಗೆ ನಿಮ್ಮನ್ನೀಗ ಕರೆದು ಪ್ರಯೋಜನವಿಲ್ಲ; ಆದರೂ ನನಗೆ ಬೇಗನೆ ಬರೆಯಿರಿ!"

ಇದಕ್ಕೆ ಸಹಿಯಿರಲಿಲ್ಲ. ಮನೋರಮೆಯೆಂದು ಸಹಿ ಮಾಡಿದ ಇತರ ಪತ್ರಗಳಲ್ಲಿಯ ಅಕ್ಷರವೇ ಇಲ್ಲಿತ್ತು. ೬-೧-೧೭೫೮ರ ಸುಮಾರಿನಲ್ಲಿಯೇ ಅವಳು ಪ್ರಸವಿಸುವ ಸ್ಥಿತಿ

ಯಲ್ಲಿರಬೇಕು; ಆದರ ಮೇಲೆ ವಿಜಯಪುರದ ಅಂಚೆಯ ಮುದ್ರೆಯಿದ್ದುದರಿಂದ ಅವಳು ಪದ್ಮನಾಭರಾಯರ ಮನೆಯಿಂದ ಪತ್ರವನ್ನು ಬರೆದಿರಬೇಕು;—ಎಂದು ವೀರಪ್ಪನು ತಿಳಿದನು. ಮೃತ್ಯುಂಜಯನ ಜನನದ ಗುಟ್ಟಕ್ಕೆ ಇದು ಸಂಬಂಧಿಸಿದಂತಿರುವುದರಿಂದ, ಈ ಪತ್ರವು ತನಗೆ ಲಾಭದಾಯಕವಾಗುವುದೆಂದು ಆತನು ಚಿಂತಿಸಿದನು. ಆ ನರಕದಲ್ಲಿ ನರಳುತ್ತಿದ್ದ ಮುದುಕನಾರು? ಅವನನ್ನಂತಹ ಸ್ಥಿತಿಯಲ್ಲಿ ತೊರೆದ ಸುಂದರಿಯೆಂಬುವಳಾರು? —ಎಂಬ ಪ್ರಶ್ನೆಗಳು ಹಾಗೆಯೇ ಉಳಿದುಬಿಟ್ಟುದರಿಂದ ಅವುಗಳ ಸ್ಪಷ್ಟೀಕರಣವನ್ನು ಕಂಡುಕೊಳ್ಳಬೇಕೆಂದು ವೀರಪ್ಪನು ಇತರ ಸ್ಪಷ್ಟಾಕ್ಷರವುಳ್ಳ ಪತ್ರಗಳನ್ನೋದಲಾರಂಭಿಸಿದನು.

ಇನ್ನೊಂದು ಪತ್ರವು ಮನೋರಮೆಗೆ ಸಂಬಂಧಿಸಿರಲಿಲ್ಲ. ಆದರ ವಿಳಾಸವು ಭಕ್ಷುಕಸಂಘದ ವಸಂತಸೇನ ದಿತ್ತು. ಆದೂ ವಿಜಯಪುರದಿಂದ ಬಂದಂತಿತ್ತು. ಸ್ವಲ್ಪ ಹೊಸತೆಂದು ತೋರುವ ಕಾಗದವೊಂದರಲ್ಲಿ ವರ್ತಕನೊಬ್ಬನ ಒಕ್ಕಣೆಯಿತ್ತು. ಅವೇನೆಂದರೆ—

" ೧೨-೩-೧೭೯೪

"ಕರಾರುಗಳನ್ನು ಒಪ್ಪಿದ್ದೇವೆ. ೨೦೦೦೦ ರೂಪಾಯಿಗಳ ಬ್ಯಾಂಕಿನ ಚೆಕ್ಕು ಇಲ್ಲಿದೆ. ಅದು ತಲುಪಿದ್ದಕ್ಕೆ ಮ। ನಾಯರಿಗೆ ಪತ್ರವನ್ನು ಬರೆಯಿರಿ. ನಾವು ಮೊದಲು ಮೂರು ಲಕ್ಷವನ್ನೂ, ಮುಂದೆ ಆರು ತಿಂಗಳಲ್ಲಿ ಅರು ಲಕ್ಷವನ್ನು ತೆಗೆದುಕೊಳ್ಳುವೆವು. ನೀವು ನಾವಾ ನುಗಳನ್ನು ಭದ್ರವಾದ ಪೆಟ್ಟಿಗೆಯಲ್ಲಿಟ್ಟು ಗುಪ್ತರೀತಿಯಿಂದ ಕಳಿಸಿದನಂತರ ಇನ್ನುಳಿದ ೨೦೦೦೦ ರೂ. ಗಳು ಸಲ್ಲಿಸಲ್ಪಡುವುವು."

ಜತನದಿಂದ ಬರೆದ ಸಹಿಯಿಲ್ಲದ ಪತ್ರವಿದು! ಮೃತ್ಯುಂಜಯನು ಹೇಳಿದ ಖೋಟಾ ನಾಣ್ಯದ ವ್ಯವಹಾರಕ್ಕಿದು ಸಂಬಂಧಿಸಿದುದೆಂದು ವೀರಪ್ಪನು ತಿಳಿದನು. ಏಕೆಂದರೆ ಅದಕ್ಕೆ ವಿಜಯಪುರದ ಮುದ್ರೆಯಿತ್ತು. ನಾ—ಎಂಬುದು ನಾಗಶೆಟ್ಟಿಯ ನಾಮದ ಸಂಕೇತರೂಪವು. ಮುಂದಿನ ಸುಂದರಿಯೊಬ್ಬಳಿಂದ ಬರೆಯಲ್ಪಟ್ಟ ಪತ್ರವು ಹೀಗಿತ್ತು. ವೀರಪ್ಪನಿಗೆ ಇದೇನೂ ಅರ್ಥವಾಗಲಿಲ್ಲ.

“ ೨—೨—೧೭೯೪

“ನಾಳಿನ ಪತ್ರದಲ್ಲಿ ಎಲ್ಲಾ ವಿವರಗಳೂ ಕೊಡಲ್ಪಡುತ್ತವೆ. ರಾಸಾಯನಿಕ ದ್ರವ್ಯದಿಂದ ಎಂದಿನಂತೆ ಅವನ್ನು ಉಜ್ಜಬೇಕು. ನಾನು—ರನ್ನು ನಾಳೆ ನೋಡುತ್ತೇನೆ.”

ಇನ್ನೆರಡು ಪತ್ರಗಳು ಮಾತ್ರ ಉಳಿದುವು. ಒಂದಂತೂ ಮಡಿಚಿದ ಬಿಳಿಯ ಕಾಗದವಾಗಿತ್ತು. ಅದನ್ನು ಅವನೆಷ್ಟು ತಿರುಗಿಸಿ ನೋಡಿದರೂ ಏನಾದರೂ ಬರೆದ ಗುರುತು ಅಣು ಮಾತ್ರವಾದರೂ ಕಂಡುಬರಲಿಲ್ಲ. ಇನ್ನೊಂದರ ಮೇಲೆ ನಡುಗುವ ಕೈಯಿಂದ ಈ ಕೆಳಗಿನಂತೆ ಮಸುಕಾಗಿ ಬರೆಯಲ್ಪಟ್ಟಿತ್ತು.

“ನೆಲಮನೆಯ ಬಲಗಡೆಯ ಮೂರಿನ ಮೂಲೆಯಲ್ಲಿಯ ಕಲ್ಲಿನ ಕೆಳಗೆ ನೋಡು. ಸುಂದರೀ, ಅದನ್ನು ಜಾಣತನದಿಂದ ಉಪಯೋಗಿಸು; ಎಂದರೆ ನಿನ್ನ ಉದ್ಧಾರವಾಗುವುದು, ಇಲ್ಲದಿದ್ದರೆ ಅಧಃಪತನ.”

ವೀರಪ್ಪನು ನಿಟ್ಟುಸಿರಿಟ್ಟು, ಎಲ್ಲವನ್ನೂ ಸರಿಪಡಿಸಿಟ್ಟುಕೊಂಡು, ಪ್ರತಾಪರುದ್ರ-ಮನೋರಮೆ-ಮೃತ್ಯುಂಜಯ-ಮರಣೋನ್ಮುಖನಾದ ಮುದುಕ-ಇವರೆಲ್ಲರ ವಿಚಾರಗಳೂ

ಮುಂದೆ ನಿಂದಿರಲು ನಿತ್ರಾಣವಾದುತ್ತ ಸ್ಮೃತಿಮರೆತು ಮಲಗಿದನು.

ಅವನಿಗೆ ಎಚ್ಚರವಾದಾಗ ಸುಮಾರು ಹತ್ತು ಗಂಟೆಯಾಗಿತ್ತು. ಶೀತಸೇರಿದ ನೆಲಮನೆಯಲ್ಲಿದ್ದ ಅವನಿಗೆ ಸಂಧಿವಾತವು ಗಂಟುಬಿದ್ದುದರಿಂದ ಅವನಿಗೆ ಮೇಲಕ್ಕೇಳಲು ಬರಲಿಲ್ಲ. ವೈದ್ಯೋಪಚಾರವು ಆವಶ್ಯಕವಾಯಿತು. ಇಂತಹ ಸ್ಥಿತಿಯಲ್ಲಿ ತಾನು ಇಂದ್ರಭವನದಲ್ಲಿರುವೆನೆಂದೂ, ಭಿಕ್ಷುಕ ಸಂಘಕ್ಕೆ ಹಣವನ್ನಿನ್ನೂ ಸಲ್ಲಿಸದಿದ್ದರೆ ಏನನ್ನೂ ಕಳುಹಿಸಲಾಗದೆಂದೂ ಅವನು ತನ್ನೊಡೆಯರಿಗೆ ಹೇಳಿಕಳಿಸಿದನು.

---

# ವಿಲಾಸಿಯಾದ ರಾಜಪುತ್ರನು

ಇತ್ತ ವೀರಪ್ಪನಿಂತು ಮೇಲಕ್ಕೇಳಲಾರದ ಸ್ಥಿತಿಯಲ್ಲಿದ್ದಾಗ ಅತ್ತ ರಾಜಪುತ್ರನು ಹಾಸಿಕೆಯಿಂದೇಳಲಾರಂಭಿಸಿದ್ದನು.

ಅವನ ಸುಂದರಶಯ್ಯಾಗಾರದ ಸೌಂದರ್ಯವನ್ನು ಕಲ್ಪಿಸಿಕೊಳ್ಳುವ ಭಾರವನ್ನು ನಮ್ಮ ಚತುರ ವಾಚಕರಿಗೇ ಬಿಟ್ಟುಕೊಟ್ಟು, ಅದರ ಇನ್ನೊಂದು ಬಾಗಿಲಿನಿಂದ ಗುಪ್ತ ಸೋಪಾನವನ್ನೇರಬಹುದಾಗಿತ್ತೆಂದೂ ಮತ್ತೊಂದರ ಮುಖಾಂತರವಾಗಿ ಮಜ್ಜನಗೃಹವನ್ನು ಸೇರಬಹುದಾಗಿತ್ತೆಂದೂ ಹೇಳಿ ಮುಖ್ಯವಿಷಯವನ್ನು ಮುಂದರಿಸುವೆವು.

ಕೆಲಕಾಲದ ಮೇಲೆ ಗುಪ್ತದ್ವಾರವು ತೆರೆಯಲ್ಪಟ್ಟಿತು. ಮುಂದೈದು ನಿಮಿಷಗಳಲ್ಲಿ ಅರವಿಂದನು ಮೆಲ್ಲನೆ ನಡೆ

ತಂದನು. ಅವನು ಬಾಗಿಲನ್ನು ಮುಚ್ಚಲಿಲ್ಲ. ಇವನನ್ನನು ಸರಿಸಿದ ವ್ಯಕ್ತಿಯೊಂದು ಗ ಘೀರವಾಗಿ ಬೆಳಸೇರಿತು.

ಗಿಡ್ಡನೂ ಪುಷ್ಟಕಾಯನೂ ಆದ ಅರವಿಂದನಿಗೆ ಸುಮಾರು ೩೦ ವರ್ಷಗಳು. ಅಚ್ಚನೀಲಿಯ ಕಣ್ಣುಗಳೂ, ಮೋರೆಯಲ್ಲಿದ್ದ ಒಂದೆರಡು ಮೈಲಿಯ ಕಲೆಗಳೂ, ಕೆಂಪು ಗಲ್ಲಿಯ ಮೀಸೆಯೂ ಎದ್ದು ಕಾಣುತ್ತಿದ್ದುವು. ಇವನು ರಾಜಪುತ್ರನ ವಿಶ್ವಾಸಪಾತ್ರನಾಗಿದ್ದನಲ್ಲದೆ ತನ್ನ ನಡೆನುಡಿಗಳಿಂದ ಜನಾನುರಾಗಕ್ಕೂ ಪಾತ್ರನಾಗಿದ್ದನು. ಅನೇಕ ತಂತ್ರಗಳಲ್ಲಿ ಸಹಾಯಮಾಡಿ ತನ್ನನ್ನು ಪಾರುಮಾಡಿದ ಇವನನ್ನು ರಾಜಪುತ್ರನು ತನ್ನ ಬಲಗೈಯೆಂದು ಭಾವಿಸಿದ್ದನು. ಅರವಿಂದನು ಮೊದಲ ಸ್ಥಾನವನ್ನು ಮಹಿಳೆಯರಿಗೂ ಎರಡನೆಯದನ್ನು ಪಾಕಶಾಸ್ತ್ರಕ್ಕೂ ಮೂರನೆಯದನ್ನು ಅಪಹಾಸ್ಯಕ್ಕೂ ಕೊಟ್ಟಿರುವುದು ಸಕಲರಿಗೂ ತಿಳಿದ ಮಾತಾಗಿದ್ದರೂ ಯಾರೇನೂ ಎನ್ನುತ್ತಿರಲಿಲ್ಲ. ಏಕೆಂದರೆ ರಾಜಾನುಗ್ರಹವೆಂಬ ರಕ್ಷಣೆಯುಳ್ಳವನಾಯಿಗೆ ವಿಬುಧವಾನ್ಯನಾದರೂ ಜೀವರಬೇಕಾಗುವುದು. ಇಂಥವನನ್ನು ರಾಜಪುತ್ರನು ಸರಿಸಮಾನನೆಂದು ಪರಿಭಾವಿಸಿದ್ದನು. ಈಗ ಮೂರು ವರ್ಷಗಳ ಹಿಂದೆ ಕುಸ್ತಿಯಲ್ಲಿ ಗೆದ್ದ ಈ ಬಡವನನ್ನು ರಾಜಪುತ್ರನು ಮಿತ್ರನೆ ದಂಗೀಕರಿಸಿ ಇಟ್ಟುಕೊಂಡನು. ಇವನೆಂದೂ ರಾಜಪುತ್ರನಿಂದ ದುಡ್ಡಿನ ಸಹಾಯವನ್ನು ತಾನಾಗಿ ಬೇಡಿ ಪಡೆದವನಲ್ಲ. ತನಗೆ ಬೇಕಾದಷ್ಟನ್ನು ಜೂಜುಗಾರಿಕೆಯಿಂದ ಗಳಿಸಿಕೊಂಡು ನೆಮ್ಮದಿಯಾಗಿದ್ದನು. ಹಿಂದಿನ ಇವನ ಇತಿಹಾಸವೇನೂ ನಮಗೆ ತಿಳಿದುಬಂದಿಲ್ಲ.

ಇಂಥವನು ಮನೆಗೆ ಬರುವುದು ಅನೇಕ ಮನೆತನಸ್ಥ

ಸದ್ಗೃಹಸ್ಥರಿಗೆ ಸರಿಬರದಿದ್ದರೂ ಅವನು ಕೆಟ್ಟವನೆಂದು ದನ್ನು ನಾವೆಲ್ಲಿಯೂ ಕೇಳಿಲ್ಲ.

ಹಾಗಾದರೆ ಇಂತಹ ಸಜ್ಜನನ ಸಂಗಾತಿ ಯಾರು?

ಈ ಕಥಾಸರವು ಪ್ರಾರಂಭಿಸುವುದಕ್ಕಿಂತಲೂ ೩೫ ವರ್ಷಗಳ ಪೂರ್ವದಲ್ಲಿ ಹಳ್ಳಿಯಲ್ಲಿನ ಒಂದು ಗುಡಿಸಲಿನಲ್ಲಿ ರುಕ್ಮಿಣಿಯು ಅವತರಿಸಿದಳು. ಇವಳು ದೊಡ್ಡವಳಾದಂತೆ ಇವಳ ಸೌಂದರ್ಯವೂ ನಡೆನುಡಿಯಲ್ಲಿಯ ಪುರುಷತನವೂ ಸ್ತ್ರೀಯ ಅಧಃಪತನವೂ ಜನಜನಿತವಾಗತೊಡಗಿದುವು. ದರೋಡೆಕೋರನಾದ ತಿಪ್ಪಣ್ಣನಿಂದ ಒಲಿಸಲ್ಪಟ್ಟು ಕೆಲವು ಕಾಲದವರೆಗೆ ಅವನೊಡನೆ ಸಂಸಾರವನ್ನು ಮಾಡಿದಳು; ಬಹುಚುರುಕು ಮತಿಯುಳ್ಳ ಇವಳು ಸ್ವಯಂಶಿಕ್ಷಕಳಾಗಿ ಓದುಬರೆಹಗಳನ್ನು ಕಲಿತು, ಅದರ ಬಲದಿಂದ ತಮ್ಮ ಅಜ್ಜನಂತಿದ್ದ ಭಗವಂತರಾಯನೆಂಬ ಅತಿಕಾಮಿ ರೊಕ್ಕಸ್ಥನ ಅರ್ಧಾಂಗಿಯಾದಳು. ಅವಳಾಗ "ಯಾವುದಕ್ಕೂ ಅಡ್ಡಿಯಿಲ್ಲ"ವೆಂಬಂತಹ ರಮಣಿಯರದೊಂದು ಸೈನ್ಯವನ್ನೇ ಕಟ್ಟಿಕೊಂಡು ಯುವಕರಿಂದ ಪರೋಪಕಾರಿಯೆಂಬ ಬಿರುದನ್ನು ದೊರಕಿಸಿದಳು; ಚಿತ್ರಕಲೆಯಲ್ಲಿ ಇವಳಂತೆಯೇ ಅರವಿಂದನೂ ಪ್ರವೀಣನಾದುದರಿಂದ ಪರಸ್ಪರರಲ್ಲಿ ಮೈತ್ರಿಯು ಮೊಳೆಯಿತು.

ಈ ರುಕ್ಮಿಣಿಯೇ ಅರವಿಂದನ್ನನುಸರಿಸಿದ ಪುರುಷನು. ಇವಳಿಗೊಪ್ಪಿದಷ್ಟು ಗಂಡುಡಿಗೆಯು ಇನ್ನಾರಿಗೂ ಒಪ್ಪಲಿಕ್ಕಿಲ್ಲ. ಸ್ವಲ್ಪ ಸ್ಥೂಲಕಾಯಳೂ ಎತ್ತರಳೂ ಆದ ಇವಳ ಮೊಗದಲ್ಲಿ ಪುರುಷಕಳೆಯಿದ್ದರೂ ಎದ್ದುಕಾಣುವ ಅವಳೆದೆಯು ಹಲವು ಸಲ ಹದಗೆಡಿಸಿಬಿಡುತ್ತಿತ್ತು. ಪುರುಷವೇಷವನ್ನು ನಾಲ್ಕು

ಜನರು ಹೌದೆನ್ನುವಂತೆ ಇವಳು ನಟಿಸುವಷ್ಟು ಪ್ರವೀಣೆಯಾಗಿದ್ದಳು.

ಅರವಿಂದನು ಗುಪ್ತದ್ವಾರವನ್ನಿಕ್ಕಿದೊಡನೆಯೇ ಬಹು ನಗಲಾರಂಭಿಸಲು ಮೊದಲೇ ಬೆರಗಿನಿಂತಿದ್ದ ರಾಜಪುತ್ರನು "ಅರವಿಂದಾ! ಈ ಪಿಶಾಚಿ ಯಾರು?" ಎಂದು ಆರ್ಭಟಿಸಿ ಕೇಳಿದನು. ಅದಕ್ಕವನು "ಸ್ವಾಮೀ, ಇವಳು ಅಪ್ಸರೆಯು" ಎಂದನು. ರಾಜಪುತ್ರನಿಗೆ ಮಿತಿಮೀರಿ ಆನಂದವಾಗಲು ಸೇವಕನಿಗೆ ಫಲಾಹಾರವನ್ನೆಲ್ಲರಿಗೂ ತಂದುಕೊಡಲು ಆಜ್ಞಾಪಿಸಿದನು.

ಈ ಅವಧಿಯಲ್ಲಿ ತಾನು ರುಕ್ಮಿಣಿಯನ್ನು ಅಗಲಿ ಮಜ್ಜನಶಾಲೆಗೆ ಹೋಗುವುದು ಅಸಭ್ಯಲಕ್ಷಣವೆಂದೂ ಅವಳಿಲ್ಲಿಗೆ ಬರುವುದನ್ನು ಅರವಿಂದನು ಮೊದಲೇ ತನಗೆ ತಿಳಿಸದಿದ್ದುದು ಅವನ ತಪ್ಪೆಂದೂ ರಾಜಪುತ್ರನೆನ್ನಲು, ತನ್ನನ್ನು ಪುರುಷಮಿತ್ರರಲ್ಲೊಬ್ಬನಂತೆ ಭಾವಿಸಬೇಕೆಂದು ಅವಳು ಬೇಡಿಕೊಳ್ಳಲು ಅದಕ್ಕವನು ಒಪ್ಪದಿರಲಿಲ್ಲ.

ಅವಳಲ್ಲಿಗೆ ಬಂದುದು ಮೊದಲಿನ ಸಲವಾದುದರಿಂದ ಅರವಿಂದನು ಕೋಣೆಯ ವೈಭವವನ್ನು ವರ್ಣಿಸಿ ತಿಳಿಸಿದ ನಂತರ ರಾಜಪುತ್ರನು ಸ್ನಾನದ ಮನೆಯ ಸೌಂದರ್ಯವನ್ನು ನೋಡಬಹುದೆನ್ನಲು, ರುಕ್ಮಿಣಿಯು ಅವನೊಡನೆ ಒಳಹೊಕ್ಕಳು. ಅವನು ಕೂಡಲೇ ಬಾಗಿಲನ್ನಿಕ್ಕಲು ತಾನದನ್ನು ನೋಡದವಳಂತಿದ್ದಳು.

ಈಸಲ ಅವನಿಗಿಂತಲೂ ಹೆಚ್ಚು ಮನೋಹರವಾಗಿ ಇವಳೇ ಅದನ್ನು ವರ್ಣಿಸತೊಡಗಿದಳು. ತಾನು ಕೇಳಿದ ತುರ್ಕೀ ಸುಲ್ತಾನರ ಜನಾನಾದ ಸೌಂದರ್ಯವನ್ನಿದು

ಹಾಸ್ಯಮಾಡುವಂತಿರುವುದೆಂದು ಮಾತಿನ ಮಾಲಿಕೆಯಲ್ಲಿ ಇವಳೆನ್ನಲು, "ನನ್ನನ್ನು ಸುಲ್ತಾನನಿಗೆ ಹೋಲಿಸಿದ ಮೇಲೆ ನೀನಾರಾಗಬೇಕಾಯಿತು?" ಎಂದವನು ನಡುಗುವ ಪಿಸು ಮಾತಿನಲ್ಲಿ ಕೇಳಲು, "ನೀವೇ ತಿಳಿದುದನ್ನು ಹೇಳಬಹುದು. ಏನೂ ಅಡ್ಡಿಯಿಲ್ಲ" ಎಂದಳು. "ಹಾಗಾದರೆ ನೀನು ಒಂದು ತಾಸಿನವರೆಗೂ ಸುಲ್ತಾನನ ರಾಣಿ" ಎನ್ನುತ್ತಾ ಅವಳನ್ನು ಬರಸೆಳೆದನು. "ನನ್ನನ್ನು ಪುರುಷಮಿತ್ರನೊಬ್ಬನೆಂದು ಭಾವಿಸಿರೆ ಮ ಬೇಡಿ, ನಾನು ಪುರುಷನೆಂದೇ ತಿಳಿದಿರಲು ನೀವು ನನ್ನಲ್ಲಿ ಸ್ತ್ರೀಭಾವನೆಯನ್ನು ಹುಟ್ಟಿಸುತ್ತೀರಿ" ಎಂದವಳೆಂದಳು.

* * * *

ಇತ್ತ ಅರವಿಂದನು ರಾಜಪುತ್ರನ ಆಸನದ ಮೇಲೆ ಕುಳಿತುಕೊಂಡು ಯಾವುದೋ ಒಂದು ಮಹತ್ವದ ಕಾಗದದ ಕಟ್ಟನ್ನು ಹುಡುಕಿ ನೋಡಲಾರಂಭಿಸಿದನು. ಗುಪ್ತಪತ್ರಗಳನ್ನಿಡುವ ಬೇರೆ ಸ್ಥಳವಿರದ್ದರಿಂದ ಎಲ್ಲವೂ ಇಲ್ಲಿಯೆ ಸಿಕ್ಕುವುವೆಂದವನ ಭಾವನೆಯಾಗಿದ್ದರೂ— ರಾಜಪುತ್ರನೆಲ್ಲಿ ಬರುವನೋ ಎಂದು ಆಗಾಗ್ಗೆ ವಿಹ್ವಲಚಿತ್ತನಾಗಿ ಅವನು ಎಲ್ಲೆಡೆಯಲ್ಲಿಯೂ ನೋಡುತ್ತಾ ಜಾಗ್ರತೆಯಿಂದ ಹುಡುಕುತ್ತಿದರೂ— ಬೇಕಾದ ಪತ್ರಗಳು ಸಿಕ್ಕಲಿಲ್ಲ. ಇಂತಹ ಸಂದರ್ಭದಲ್ಲಿ ಸಹಜವಾಗಿರುವಂತೆ ಕೊಟ್ಟಕೊನೆಗೊಂದು ಕಾಗದದ ಚೀಲವು ದೊರೆಯಿತು; ಅದನ್ನು ನೋಡಿದೊಡನೆಯೇ ಇವನಿಗಾನಂದವಾಯಿತು.

ರಾಜಪುತ್ರನೂ ರುಕ್ಮಿಣಿಯೂ ಬಂದನಂತರ ಫಲಾಹಾರಕ್ಕಾರಂಭವಾಯಿತು.

ಮಾತಿನ ಮೇಲೆಮಾತು ಬರಲು ಅರವಿಂದನು "ನೀವು ನಿನ್ನೆ ಸಾಯಂಕಾಲದ ಸುಮಾರು ಆರು ಗಂಟೆಯಿಂದ ರಾತ್ರಿಯಹತ್ತು ಗಂಟೆಯವರೆಗೂ ಎಲ್ಲಿಯೋ ದಯಮಾಡಿಸಿದ್ದಿರಿ" ಎನ್ನಲು, ರಾಜಪುತ್ರನು ಸ್ವಲ್ಪ ದೊಡ್ಡ ದನಿಯಲ್ಲಿ, "ಅಹುದು, ಈ ದಿವಸವೂ ಆ ಸಮಯದಲ್ಲಿ ನಾನಿಲ್ಲಿರುವುದಿಲ್ಲ. ನೀನು ಬರಬೇಡ" ಎಂದನು. "ಹಾಗಾದರೆ ಹಗಲಿನಲ್ಲಿಯೇ ರಾತ್ರಿಯೂಟವನ್ನು ಮುಗಿಸಲು ನಾನು ಬರುವುದಿಲ್ಲ—" ಎನ್ನುವುದರೊಳಗಾಗಿ, "ಅರವಿಂದಾ, ಮಧ್ಯರಾತ್ರಿಯ ಹೊತ್ತಿಗೆ ಬಾ. ನಾವಿಬ್ಬರೇ ಮಾತನಾಡುತ್ತಾ ಭೋಜನವನ್ನು ಸ್ವೀಕರಿಸೋಣ, ನೀನು ಬಂದೇಬಿಡು. ಏಕೆಂದರೆ ನಾನೊಂದು ಮಹತ್ವದ ವಿಷಯದಲ್ಲಿ ನಿನ್ನ ಸಹಾಯವನ್ನು ಪಡೆಯಬೇಕೆಂದಿರುವೆನು" ಎಂದು ರಾಜಪುತ್ರನುಸುರಿದನು.

---

# ಶಿವಪ್ರಸಾದಳು

ಸಾಯಂಕಾಲ ಸುಮಾರು ಏಳು ಗಂಟೆಯಾಗಿತ್ತು. ಕೋಣೆಯಲ್ಲಿ ಲೀಲೆಯು ವೀಣೆಯನ್ನು ನುಡಿಸುವುದರಲ್ಲಿ ತನ್ಮಯಳಾಗಿದ್ದಳು. ಆಲ್ಲಿನ್ನಾರೂ ಇರಲಿಲ್ಲ—ಅಲ್ಲೇಕೆ? ಇಡೀ ಮನೆಯಲ್ಲಿಯೂ ಇನ್ನಾರೂ ಇರಲಿಲ್ಲ. ಏಕೆಂದರೆ ಕೆಲಸದವಳು ಮನೆಗೆ ಹೋಗಿ ಬಹಳ ಹೊತ್ತಾಗಿತ್ತು; ತಾರೆಯು ಐದು ಗಂಟೆಗೇ ಹೊರಬಿದ್ದಿದ್ದಳು.

ತಾರೆಯು ತಾನೆರಡು ದಿನಗಳಿಂದಲೂ ಹಲವು ತಾಸುಗಳ ವರೆಗೆ ಹೊರಗೆ ಹೋಗುತ್ತಿರುವುದರ ಕಾರಣವನ್ನು

ಏನೆಂದು ಹೇಳಿದಳೋ ನಮಗೀಗ ಗೊತ್ತಿಲ್ಲ. ಇಷ್ಟು ಮಾತ್ರ ನಿಜ— ಲೀಲೆಗೆಲ್ಲವೂ ಸಮರ್ಪಕವೆಂದು ತೋರಿತು; ತಂಗಿಯ ತಂತ್ರದ ವಾಸನೆಯಾದರೂ ಬರಲಿಲ್ಲ.

ಹಿಂದೆ ಹೇಳಿದಂತೆ ಲೀಲೆಯು ಸಂಗೀತದಲ್ಲಿ ಮೈಮರೆತಿದ್ದಳು. ಹಾಡುವುದರಿಂದಾದ ಸುಖಶ್ರಮದಿಂದ ಮೊದಲೇ ಕೆಂಪಾದ ಗಲ್ಲಗಳು ಮತ್ತೂ ಕೆಂಪಾದುವು. ಇವಳ ಉಸಿರಿನ ಗಾಳಿಯೊಡನೆ ಮುಡಿದ ಹೂಗಳ ಪರಿಮಳವು ಬೆರೆದು, ಇಂಚರದಿಂದ ಕರ್ಣಾನಂದವೂ ಸುರೂಪದಿಂದ ನೇತ್ರಾನಂದವೂ ಆಗುತ್ತಿರುವಾಗ ಸ್ಪರ್ಶಘ್ರಾಣೇಂದ್ರಿಯಗಳನ್ನೂ ಪರವಶಗೊಳಿಸುತ್ತಿದ್ದಿತು. ಕೃಷ್ಣಸರ್ಪವೊಂದು ಅವಳ ತಲೆಯ ಮೇಲೆ ಹೆಡೆಯಿಟ್ಟು ಕಟಿಪ್ರದೇಶದವರೆಗೂ ಇಳಿಬಿದ್ದಿತ್ತು. ಅವಳು ಹೆಚ್ಚು ಹೆಚ್ಚು ತನ್ಮಯಳಾಗಿ ಹಾಡಿದಂತೆ ಅದು ಹೆಡೆಯನ್ನು ಹೆಚ್ಚು ಹೆಚ್ಚು ಆಡಿಸುತ್ತಿತ್ತು. ಕಮಲವೇ ಬಂದು ನೆಲೆಸಿರುವುದರಿಂದ ಮನಮನೋಹರವಾದ ಹಸ್ತಪಾದಗಳೂ, ಅಮೃತವೇ ಘನೀಭೂತವಾದುದರಿಂದುಂಟಾದ ಅವಯವಗಳೂ, ಅಸ್ತವ್ಯಸ್ತವಾದ ವಸನದಲ್ಲಿ ಅರ್ಧಮರ್ಧ ಪ್ರಕಾಶಿಸಿದುವು. ಇವಳ ಇನಿದನಿಯೂ ವೀಣೆಯ ಮೃದುನಾದವೂ ಗಂಗೆಯಮುನೆಯರಂತೆ ಸೇರಿಹೋದುವು. ವಾದ್ಯಗಳ ಶಿರೋಮಾಣಿಕವೆಂದು ಸರಸ್ವತಿಯು ಅಪ್ಪಿಕೊಂಡಿರುವ ವೀಣೆಯ ಸ್ವರದಿಂದ ವನಿತೆಯರ ದನಿಗೆ ಕಳೆಯೇರುವುದೋ ಕಾವ್ಯಾದಿಕಲೆಗಳ ಶೃಂಗಾರಮಾರ್ಗಕ್ಕೆಂದಿಗೂ ಸಿಕ್ಕದಂತಹ ನಮ್ಮ ಕೋಮಲೆಯರು ಹಾಡುವಾಗ ಅವರ ದನಿಯಿಂದ ವೀಣಾನಾದಕ್ಕೇ ಕಳೆಯೇರುವುದೋ ಎಂಬುದು ಸುಲಭಸಾಧ್ಯವಾಗಿ ತಿಳಿಯತಕ್ಕ ಮಾತಲ್ಲವಾದರೂ, ಹಾಡು

ವಾಗ ಮಹಿಳೆಯರು ಹೆಚ್ಚು ಮೋಹಕರಾಗುವರೆಂದೂ ಅವರ ದನಿಯು ಗುರುತಿಸಲು ಅಸಾಧ್ಯವಾಗುವದು. ಇಂತಾಗುವುದೆಂದೂ ಕಂಡುಬಂದಿರುವುದು.

ಇಂತಹ ಸುಂದರ ಲೀಲೆಯ ವಿರುದ್ಧವಾಗಿ—ಸರಳ ಮತ್ತು ಶಾಂತವಾದ ಮೋಹಿನಿಯ ವಿರುದ್ಧವಾಗಿ—ನಾಟಕ ತಂತ್ರವೊಂದು ಆಗಲೇ ರಚಿಸಲ್ಪಟ್ಟಿತ್ತು.

ಹಾಡುವುದನ್ನಲ್ಲಿಗೇ ಬಿಟ್ಟು ಲೀಲೆಯು ನಿಂತಿದ್ದಳು. ಹೊರಬಾಗಿಲನ್ನಾರೋ ಬಿಟ್ಟೂಬಿಡದೆ ಬಡಿಯುತ್ತಿದ್ದರು. ಊರಿನಿಂದ ತಂದೆಯು ಬಂದನೆಂದು ಅವಳು ಬಹು ಹರ್ಷಿತಳಾದಳು.

ಲೀಲೆಯು ಬಾಗಿಲನ್ನು ತೆರೆದೊಡನೆಯೇ ನಿರಾಶಳಾದಳು. ಅಲ್ಲಿ ತಂದೆಯಿರಲಿಲ್ಲ. ಯುವತಿಯೊಬ್ಬಳು ದೀನಸ್ವರದಿಂದ, "ಅಮ್ಮಾ, ಸ್ವಲ್ಪ ಹೊತ್ತು ನನ್ನನ್ನು ಇಲ್ಲಿ ನಿಲ್ಲಗೊಡು, ದುಷ್ಟರ ದೃಷ್ಟಿಗೆ ಬೀಳಬಾರದೆಂದು ಓಡಿಬಂದಿದ್ದೇನೆ" ಎಂದು ಬೇಡಿಕೊಂಡಳು. ಕರುಣಾಳುವಾದ ಲೀಲೆಯು ಕೂಡಲೇ ಅವಳನ್ನು ಒಳಗೆ ಬರಗೊಟ್ಟಳು. ಅವಳು ಬಹು ದೊಡ್ಡ ಮನೆತನದವಳಂತಿದ್ದಳು. ಮಾತಿನಿಂದ ಅವಳು ದಾಕ್ಷಿಣ್ಯದ ಸ್ವಭಾವದವಳೆಂದೂ ಸಭ್ಯಳೆಂದೂ ಗೊತ್ತಾಯಿತು. ಸೌಂದರ್ಯದಲ್ಲಿ ಇಬ್ಬರೂ ಸರಿಜೋಡಿಯಾಗಿದ್ದರು.

ಶಿವಪ್ರಸಾದನು ಇಷ್ಟು ಮೃದು, ಸುಂದರ, ಜಾಣಳಾದ ಮೋಹಿನಿಯನ್ನು ಯಾವ ಅರಮನೆಯಲ್ಲಿಯೂ ಕಾಣಲಿಲ್ಲವೆಂದುಕೊಂಡನು. ಪಾರ್ವತಿಯ ತಂತ್ರವನ್ನು ಮೆಚ್ಚಿ ಮನದಲ್ಲಿಯೇ ಅವಳ ಉಪಕಾರವನ್ನು ಸ್ಮರಿಸಿದನು.

ಇನ್ನು ಸಂಭಾಷಣೆಗಾರಂಭವಾಯಿತು.

" ನೀವು ತೋರಿದ ಕರುಣೆಗಾಗಿ ನಾನಿಲ್ಲಿ ದಾಸಿಯಾಗಿ ದುಡಿದರೂ ನಿಮ್ಮುಪಕಾರವು ತೀರುವುದಿಲ್ಲ. ನನ್ನ ಅಳುವ ಧ್ವನಿಯನ್ನು ಕೇಳಿ ಕಳವಳಪಡಬೇಡಿ, ಅಯ್ಯೋ, ನಮ್ಮ ತಾಯಿಯ ಸ್ಥಿತಿಯೇನಾಯಿತೋ ? ಆ ಕಳ್ಳರು-ದುಷ್ಟರು-"

" ಸಮಾಧಾನವಿ, ಸಾವಧಾನವಾಗಿ ಹೇಳು, ನಿಮ್ಮ ತಾಯಿಯನ್ನು ನಾನು ಹುಡುಕಿಸುತ್ತೇನೆ—ಅಥವಾ ನಾನೇ— "

" ಬೇಡ, ಬಾಯಿ, ಬೇಡ. ರಾತ್ರಿಯಾಗುತ್ತಿದೆ. ನಾವಿಬ್ಬರೂ ಬರುವಾಗ ದುಷ್ಟರು ಮೇಲೆ ಬಿದ್ದರು. ನಾನು ಹೆದರಿ ಓಡಿದೆ. ಕೊನೆಗೆ ಕಂಗೆಟ್ಟೆ. ಮನೆಯ ದಾರಿಯ ನ್ನರಿಯೆ. ನೀವು ದಯಮಾಡಿದಿರಿ. ನಿಮ್ಮ ಹೆಸರು? "

" ಲೀಲಾ. ನಮ್ಮ ತಂದೆಯು ಊರಿನಲ್ಲಿಲ್ಲ. ಅವನಿದ್ದರೆ? -ಪ್ರಿಯೆ, ಇನ್ನಾರೂ ಇಲ್ಲಿ ಇಲ್ಲವಲ್ಲ !! ನಿನ್ನ ಹೆಸರೇನು ? "

" ನನ್ನ ಹೆಸರು ಪರಿಮಳಾ. "

" ಅದೆಷ್ಟು ಸುಂದರವಾದ ಹೆಸರು !! ಅದೆಷ್ಟು ವಿನಯವುಳ್ಳ ಹುಡುಗಿ !! "

" ಲೀಲಾ, ನಿನ್ನ ಹೆಸರೂ ಚೆನ್ನಾಗಿದೆ. ನೀನೊಬ್ಬಳೇ ಇರುವುದರಿಂದ ನಾನು ಬಂದುದು— "

"—ಅಹುದು, ಅನುಕೂಲವಾಯಿತು. ನೀನಿಲ್ಲಿಯೇ ಇರು. ನಿಮ್ಮ ತಾಯಿಯು ಇಂದಿಲ್ಲ ನಾಳೆಯಾದರೂ ಈ ಕೇರಿಯಲ್ಲಿಯ ಪ್ರತಿ ಮನೆಯಲ್ಲಿಯೂ ತನ್ನ ಮಗಳನ್ನು ವಿಚಾರಿಸುವಳು. ನೀನು ಸಿಕ್ಕುವಿ. ಇದಲ್ಲದೆ ನೀನೆಂದಂತೆ ದುಷ್ಟರು ದಾರಿಯಲ್ಲಿರುವರು. ನಮ್ಮ ತಂಗಿಯು ಬಂದ ಮೇಲೆ ನೀನು ಮನೆಗೆ ಹೋಗಲೇ ಬೇಕೆಂದರೆ ಇಬ್ಬರೂ ಬಂದು ಕಳಿಸುವೆವು. "

"ಬೇಡ ಬೇಡ, ಮನೆಯು ಬಹುದೂರವಿದೆ. ನನಗಂತೂ ಎಲ್ಲೆಲ್ಲಿ ತಿರುಗಿಹೋಗಬೇಕೆಂಬುದು ಗೊತ್ತಿಲ್ಲ. ನಾನಿಲ್ಲಿಯೇ ಇರುತ್ತೇನೆ. ಇಲ್ಲೆಲ್ಲಿಯಾದರೂ ಭೋಜನಾಲಯವಿದ್ದರೆ ಹೇಳು—"

"ಅದೇಕೆ? ಇಗೋ ಇವುಗಳನ್ನೆಲ್ಲಾ ತಿನ್ನು. ನಮ್ಮ ತಂಗಿಯು ಹನ್ನೊಂದು ಗಂಟೆಯ ವರೆಗೂ ಬರುವುದಿಲ್ಲ. ನಿದ್ರೆಯು ಬಂದರೆ ಈ ಹಾಸಿಕೆಯಿದೆ. ಅದು ತಂದೆಯದು. ಅವನಿಂದು ಬಹುಶಃ ಬರಲಿಕ್ಕಿಲ್ಲ."

ಶಿವಪ್ರಸಾದನು ತನ್ನ ಕಾರ್ಯಕ್ಕೆ ದೈವಸಹಾಯವಿದೆ ಯೆಂದುಕೊಂಡನು.

"ಇಂತಹ ಕರುಣೆ, ಇಂತಹ ಭೂತದಯೆ—"

"ಪರಿಮಳಾ, ವರ್ಣನೆಯು ಬೇಡ, ಈಗಾಗಲೇ ಹೊತ್ತಾಯಿತು. ನಾನು ನಿನ್ನನ್ನು ಪ್ರೀತಿಸುವಷ್ಟೇ ನೀನೂ ನನ್ನನ್ನು ಪ್ರೀತಿಸುತ್ತಿರುವೆಯೆಂಬುದನ್ನು ಬಲ್ಲೆ."

ಇಬ್ಬರೂ ಮಾತಿನಲ್ಲಿ ಮೂರು ತಾಸನ್ನು ಕಳೆದುಬಿಟ್ಟರು. ಒಬ್ಬಳ ನೋಟದಲ್ಲಿಯೂ ಭಾವದಲ್ಲಿಯೂ ಸ್ಪರ್ಶದಲ್ಲಿಯೂ ಒಂದು ಉದ್ದೇಶವಿತ್ತು. ಇನ್ನೊಬ್ಬಳಲ್ಲಿ ಬರಿಯ ಸರಳತೆಯಿತ್ತು.

ಹತ್ತು ಗಂಟೆಯಾಗಿಹೋಯಿತು. ಲೀಲೆಯೂ ಪರಿಮಳೆಯೂ ಮಾತನಾಡುತ್ತಾ ಊಟ ಮಾಡುವುದರಲ್ಲಿ ಹನ್ನೊಂದು ಗಂಟೆಯೂ ಹೊಡೆಯಿತು. ತಾರೆಯಿನ್ನೂ ಬಾರದಿದ್ದುದರಿಂದ ಲೀಲೆಯು ಅತಿ ಉತ್ಕಂಠಿತೆಯಾದಳು. ಶಿವಪ್ರಸಾದನಿಗೆ ಮಾತ್ರ ಅವಳು ಬೆಳಗಾಗುವ ವರೆಗೂ ಬರುವುದೇ ಇಲ್ಲವೆಂಬುದು ನಿಶ್ಚಿತವಾಗಿ ತಿಳಿದಿತ್ತು. ಇನ್ನು

ಲೀಲೆಯನ್ನು ತಳುವದೆ ಶಯ್ಯಾಗಾರಕ್ಕೊಯ್ಯುವ ಉದ್ದೇಶದಿಂದ ಅವನು ತೂಕಡಿಸುವುದನ್ನು ನಟಿಸತೊಡಗಿದನು. ತಾರೆಯು ಬರುವ ವರೆಗೂ ತಾನು ಎಚ್ಚರದಿಂದಿರುವುದಾಗಿಯೂ ಪರಿಮಳೆಯನ್ನು ಕೋಣೆಯಲ್ಲಿ ಮಲಗಿಸುವುದಾಗಿಯೂ ಲೀಲೆಯು ಹೇಳಿ ಮೇಲಕ್ಕೇಳಲು, ಶಿವಪ್ರಸಾದನು ತಾನು ತೂಕಡಿಸುದುದಕ್ಕಾಗಿ ಅವಳ ಕ್ಷಮಾಪಣೆಯನ್ನು ಬೇಡಿ, ಅವಳಿದ್ದಲ್ಲಿಯೇ ತಾನಿರುವುದು ಹೆಚ್ಚು ಆನಂದಕರವೆನಿಸುವುದೆಂದನು.

ಅರ್ಧರಾತ್ರಿಯಾಯಿತು— ತಾರೆಯಿನ್ನೂ ಬರಲಿಲ್ಲ.

"ತಾರೆಯು ಹನ್ನೊಂದರೊಳಗಾಗಿ ಬರುವೆನೆಂದು ಹೇಳಿದ್ದಳು. ಏಕೋ ಬರಲಿಲ್ಲವಲ್ಲಾ!!" ಎಂದು ಲೀಲೆಯೆನ್ನಲು, ಪರಿಮಳೆಯು "ಅವಳು ನಿರ್ವಾಹವಿಲ್ಲದೆ ನಿಂತಿರಬಹುದು" ಎಂದಳು.

ಅದಕ್ಕೆ ಲೀಲೆಯು, "ಹಾಗೆಯೇ ಕಾಣುತ್ತದೆ. ನಿನ್ನೆ ದೇವರ ಗುಡಿಗೆಂದು ಹೋಗುವಾಗ ದಾರಿಯಲ್ಲೊಂದು ಎತ್ತಿನ ಬಂಡಿಯು ಉರುಳಿ ಬಿದ್ದು, ಅದರಲ್ಲಿದ್ದ ವೃದ್ಧರಮಣಿಯೊಬ್ಬಳಿಗೆ ಬಹು ನೋವಾಯಿತಂತೆ. ಅವಳನ್ನು ಅಲ್ಲಿಯೇ ಇದ್ದ ನನ್ನ ತಂಗಿಯು ಕೈಗೊಟ್ಟೆಬ್ಬಿಸಿದಳು. ಅವಳ ಮನೆಯೂ ಸಮೀಪದಲ್ಲಿದ್ದುದರಿಂದ ಅಲ್ಲಿಗೊಯ್ದು ಬಿಡಲು, ಮನೆಯಲ್ಲಿ ತಾನೊಬ್ಬಳೇ ಇರುವುದಾಗಿಯೂ ಸ್ವಲ್ಪ ಚೇತರಿಸಿಕೊಳ್ಳುವ ವರೆಗೂ ತಾರೆಯೂ ಅಲ್ಲಿಯೇ ಇರುವುದರಿಂದ ಉಪಕಾರವಾಗುವುದೆಂದೂ ಅವಳು ಪ್ರಾರ್ಥಿಸಲು ತಾರೆಯು ಒಲ್ಲೆನಲಿಲ್ಲ. ನಿನ್ನೆ ನನ್ನ ತಂಗಿಯು ಮನೆಗೆ ಬಂದಾಗ ಹನ್ನೊಂದಾಗಿತ್ತು. ಅಸಹಾಯಳಾದ ಅವಳನ್ನು ಈ ದಿನವೂ ನೋಡಿ

ಕೊಂಡು ಬರುವುದು ಸುಜನತೆಯೆಂದೂ ಅವಳೊಂದು ವೇಳೆ ಕೆಲಕಾಲ ತನ್ನನ್ನಲ್ಲಿ ನಿಲ್ಲಿಸಿಕೊಂಡರೆ ಬರುವುದು ತಡವಾಗುವುದೆಂದೂ ತಾರೆಯು ಹೇಳಿ ಹೊರಗೆ ಹೋದಳು. ಈಗಾಗಲೆ ಹನ್ನೆರಡೂಕಾಲು ಗಂಟೆಯಾಯಿತು" ಎಂದಳು.

ಪರಿಮಳೆಯೆಂದಳು: "ಪ್ರಿಯ ಲೀಲಾ, ಈಗ ಚಿಂತೆಗೆ ಕಾರಣವಿಲ್ಲ. ಏಕಾಕಿಯಾಗಿರುವ ಆ ವೃದ್ಧಳು ಈಗ ಹೀನ ಸ್ಥಿತಿಯಲ್ಲಿರಬಹುದು. ನಿನ್ನಂತೆಯೇ ಕರುಣಾಳುವಾದ ನಿನ್ನ ತಂಗಿಯು ಅಂತಹ ಸ್ಥಿತಿಯಲ್ಲಿ ಅವಳನ್ನು ತೊರೆಯುವುದು ಉಚಿತವಲ್ಲವೆಂದೂ ತಾನು ಬಾರದಿದ್ದುದರ ಕಾರಣವನ್ನು ಸಹಜವಾಗಿ ನೀನು ಊಹಿಸಬಹುದೆಂದೂ ಭಾವಿಸಿ ಅಲ್ಲಿಯೇ ನಿಂತಿರುವಳು."

ಲೀಲೆಯ ಮುಖವರಳಿತು: "ಈಗಾನಂದವಾಯಿತು. ನಿಜಸ್ಥಿತಿಯು ಹಾಗೆಯೇ ಇರಬೇಕು. ಅಹುದು, ಅದು ಸರಿ! ಈಗ ಅಪರಾತ್ರಿಯಾಗಿರುವುದರಿಂದ ನಿನ್ನನ್ನು ನಿದ್ರೆಗೆಡಿಸಲಾಗದು. ನಾನೂ ಕೂಡಲಾರೆ."

ಶಿವಪ್ರಸಾದನು ಹಿಂದೆಮುಂದೆ ನೋಡುತ್ತಾ ಕೇಳಿದನು:

"ನಿಮ್ಮ ತಂಗಿಯಿಲ್ಲದಿರುವುದರಿಂದ ನಾವು ರಾತ್ರಿಯಲ್ಲಿ ಸಹ ಅಗಲಿರುವ ಕಾರಣವಿಲ್ಲ. ಅಲ್ಲವೇ?"

"ಪರಿಮಳಾ, ಏನೂ ಅಡ್ಡಿಯಿಲ್ಲ. ನನ್ನ ಮಗ್ಗುಲಲ್ಲಿಯೇ ತಾರೆಯ ಹಾಸಿಗೆಯ ಮೇಲೆ ಮಲಗಿಬಿಡು. ನಿನ್ನೊಡನಾಟದಿಂದ ನನಗೆ ಅತಿ ಹರುಷವಾಗಿದೆ"—ಹೀಗೆ ನುಡಿದು ಸರಳ ಸ್ವಭಾವದ ಸಂಶಯರಹಿತ ರಮಣಿಯು ಪರಿಮಳೆಯೊಡನೆ ಶಯ್ಯಾಗಾರವನ್ನು ಸೇರಿದಳು.

---

# ಕಾಮಿಯೂ ಕುಮಾರಿಯೂ

ಲೀಲೆಯು ಬಾಗಿಲನ್ನಿಕ್ಕಿದೊಡನೆಯೇ ಪರಿಮಳೆಯು ಅವಳ ಹೆಗಲಿನ ಮೇಲೆ ಕೈಹಾಕಿ, ಹಾಸಿಗೆಯ ಮೇಲೆ ಅವಳ ಮಗ್ಗುಲಲ್ಲಿಯೇ ಕುಳಿತುಕೊಂಡಳು. ಪರಿಮಳೆಯ ಮೊಗದಲ್ಲಿ ಉತ್ಸುಕತೆಯು ಎದ್ದು ಕಾಣುತ್ತಿದ್ದರೂ ವಿಚಾರ ತರಂಗಗಳ ಹೊಯ್ದಾಟವು ಮಿಸುಗದಿರಲಿಲ್ಲ. "ಪ್ರಿಯ ಸಖೀ, ಅಪರಿಚಿತಸ್ಥಳವೆಂದು ಬೇಸರಗೊಂಡಿರುವೆಯಾ?" ಎಂದು ಲೀಲೆಯು ಕೇಳಿದಳು. ಕೂಡಲೆ ಪರಿಮಳೆಯು ಅವಳ ಬಾಯಿಯ ಮೇಲೆ ಕೈಯಿಟ್ಟು, "ಪ್ರಿಯೆ, ಹಾಗೆನ ಬೇಡ. ನನಗಿಪರಿಂದದುಃಖವಾಗಿದೆ. ಒಂದು ವಿಧದಿಂದ ಸುಖವೆನಿಸುತ್ತದೆ. ಒದಗುವ ಗಂಡಾಂತರಗಳೆಲ್ಲಾ ಒಂದು ಲ್ಲೊಂದು ರೀತಿಯಲ್ಲಿ ನಮ್ಮ ಹಿತಾರ್ಥವಾಗಿ ಎಂಬ ನುಡಿಯು ಸಟೆಯಲ್ಲ. ಏಕೆಂದರೆ ನನಗೆ ನಿನ್ನ ಸ್ನೇಹಲಾಭವಾದುದು ಸಾಧಾರಣ ವಿಷಯವಲ್ಲ. ಈಗ ಆರು ತಾಸುಗಳ ಹಿಂದೆ ನಾನಾರೋ ನೀನಾರೋ ಆಗಿದ್ದರೂ, ಈಗ ನಮ್ಮಲ್ಲಿ ದೃಢ ವಾದ ಪ್ರೇಮವು ಅಂಕುರಿಸಿದೆ" ಎಂದಳು.

"ಹಾಗಾದರೆ ನಾವಿಬ್ಬರೂ ಪ್ರಾಣಸ್ನೇಹಿತರು. ಸಮ ವಯಸ್ಸಿನ ಯೋಗ್ಯ ಸಂಗಾತಿಯೊಬ್ಬಳು ನನಗೆ ಬೇಕಾಗಿದ್ದಳು."

"ನನ್ನ ಪರಿಸ್ಥಿತಿಯೂ ಹಾಗೆಯೇ ಇತ್ತು. ನಿನ್ನ ವಯಸ್ಸೆಷ್ಟು?"

"ಸುಮಾರು ಇಪ್ಪತ್ತೆರಡು, ನಿನಗೆ?"

"ನೀನೇ ಅಂದಾಜಿನ ಮೇಲೆ ಹೇಳು."

"೨೫ ಅಥವಾ ೨೬."

ಶಿವಪ್ರಸಾದನು ಅವಳ ಸಮವಯಸ್ಸಿನವನೆಂಬುದನ್ನು ವ್ಯಕ್ತಪಡಿಸಲು:

"ಹಾಗಲ್ಲ, ನನಗೂ ನಿನ್ನಷ್ಟೇ ವಯಸ್ಸು. ನಾವು ಆಜನ್ಮದ ವರೆಗೂ ಕೂಡಿಕೊಂಡಿರೋಣ! ನೀನಿದನ್ನು ಒಪ್ಪುವೆಯಲ್ಲವೆ?"

"ಮನಃಪೂರ್ವಕವಾಗಿ."

ಪರಿಮಳೆಯು ಮೆಲ್ಲನೊಮ್ಮೆ ಲೀಲೆಯನ್ನು ಚುಂಬಿಸಿದಳು. ಲೀಲೆಗೆ ಇದರಿಂದೇನೂ ಎನಿಸಲಿಲ್ಲ.

ಶಿವಪ್ರಸಾದನು ಮೆಲ್ಲನೆ ತನ್ನ ಕಾರ್ಯವನ್ನು ಸಾಧಿಸುವುದಕ್ಕೆ ಅನುಕೂಲವಾದ ಉತ್ತೇಜಕ ಸಂಭಾಷಣೆಯನ್ನು ಆರಂಭಿಸಿದನು.

"ಲೀಲಾ - ನೋಡು. ಇದರಲ್ಲೇನೋ ಗೂಢವಿದೆ. ಅದೊಂದು ವಿಚಿತ್ರತಮರೀತಿಯಲ್ಲಿ ಪ್ರತಿ ವಿಷಯದಲ್ಲಿಯೂ ನಾವಿಬ್ಬರೂ ಒಂದುಗೂಡುತ್ತಿದ್ದೇವೆ. ಹೀಗಿದ್ದರೂ ಸಹ ಪರಿಸ್ಥಿತಿಗನುಸಾರವಾಗಿ ಒಬ್ಬರಿಗೆ ಹೆಚ್ಚು ಅನುಭವವಿದೆ; ಇನ್ನೊಬ್ಬರಿಗೆ ಇಲ್ಲ."

ತನ್ನ ಸೆರಗನ್ನು ಸರಿಪಡಿಸಿಕೊಳ್ಳುವುದರಲ್ಲಿದ್ದ ಲೀಲೆಯು "ಪ್ರಿಯೆ, ಪರಿಮಳಾ, ನಿನ್ನ ಮಾತು ನನಗರ್ಥವಾಗಲಿಲ್ಲ" ಎಂದಳು.

ಪರಿಮಳೆಯು ನಿಟ್ಟುಸಿರಿಟ್ಟು ನುಡಿದಳು: "ಅದು ನನಗೆ ಸಂಬಂಧಿಸಿದುದು."

"ನಾನಾಗಲೇ ಕೇಳಲಿಲ್ಲವೇ? ನಿನಗೇಕೋ ಮನಃಸ್ವಾಸ್ಥ್ಯವಿಲ್ಲ. ನಾವಿಬ್ಬರೂ ನಂಬಿಗೆಯ ಸಂಗಾತಿಗಳಾದು

ದರಿಂದ—ಏನೊಂದು ಹೇಳಿ ಮುಚ್ಚಿಡಬೇಕಾದ ಸಂಗತಿಯಾಗಿದ್ದರೂ—ನೀನೇನೂ ಮರೆಮಾಡತಕ್ಕದ್ದಿಲ್ಲ."

"ನಿನ್ನ ಮುಂದೆ ನಾನೇನೂ ಮುಚ್ಚಿಡುವುದಿಲ್ಲ. ಪ್ರಿಯೆ, ಕೇಳು. ನಾನು.... ಪ್ರೀತಿಸುತ್ತೇನೆ."

"ನಿನ್ನ ಈ ಸ್ಥಿತಿಗೆ ಅದೇ ಕಾರಣವೋ? ಒಂದು ವೇಳೆ ನೀನೂ ಪ್ರತಿಯಾಗಿ ಪ್ರೇಮಿಸಲ್ಪಟ್ಟಿರಲಿಕ್ಕಿಲ್ಲ, ಅಲ್ಲವೋ?"

"ನನಗದು ತಿಳಿಯದು. ನನಗೆ, ಲೀಲಾ, ಆಶೆಯಿದೆ—ಭಯವೂ ಇದೆ. ಈಗ ನೀನು ಹೇಳು. ನೀನು ಪ್ರೀತಿಸುವುದನ್ನು ಬಲ್ಲೆಯೋ?"

"ಇಲ್ಲ."

"ಹಾಗಾದರೆ ಆತ್ಮಾನಂದವೆಂಬ ಮಹಾನದಿಯ ಮೂಲವನ್ನು ಸಹ ನೀನು ನೋಡಿಲ್ಲ; ಅಥವಾ ನಾನು ಹೀಗೆ ಹೇಳಬಹುದು: ಅದು ಹೃದಯಕ್ಕೆ ಅತಿಹಿತಕರವಾದುದು, ಭಾವನೆಗೆ ಸ್ವರ್ಗದಂತಹುದು."

"ಹಾಗಾದರೆ, ಪರಿಮಳಾ, ನಿನಗಿದರಿಂದ ದುಃಖವಾಗಿರುವುದೇಕೆ?"

"ಓ, ಪ್ರೇಮವೆಂಬುದು ನನಗೇ ಹೇಳಬರದಂತಹುದು—ಅದು ಸುಖಮಯವಾದ ದುಃಖ, ಅಥವಾ ದುಃಖಮಯವಾದ ಸುಖ. ಅದು ಸ್ವರ್ಗೀಯ ಸುಖದಾಶೆಯನ್ನು ತೋರಿ, ಅದನ್ನು ಕೈವಶಪಡಿಸಿಕೊಳ್ಳುವುದರಲ್ಲಿ ಭಯವುಂಟಾಗದಂತೆ ಮಾಡಿ, ಧೈರ್ಯವನ್ನಿತ್ತು ಎಲ್ಲರನ್ನೂ ಪ್ರೋತ್ಸಾಹಿಸುವುದು. ಕಾರ್ಯಸಾಧನೆಯಲ್ಲಿ ಭಯವುಂಟಾದರೂ ಅಭಯದಿಂದ ಪ್ರೋತ್ಸಾಹವು ದೊರೆಯುವುದೇ ಹೊರತು ಕಾರ್ಯವನ್ನಲ್ಲಿಗೇ ಬಿಡಿಸುವ ಹೆದರಿಕೆಯುಂಟಾಗುವುದಿಲ್ಲ. ನನಗೆ

ಭಯವುಂಟಾಗಿರುವುದರಿಂದ ದುಃಖವಾಗಿದೆಯೆಂದು ಹೇಳಿದರೆ, ಭಯದಿಂದುಂಟಾದ ಪ್ರೋತ್ಸಾಹದ ಫಲವಾಗಿ ಆಶೆಯುಂಟಾಗಿರುವುದರಿಂದ ನಾನು ಸುಖಿಯಾಗಿರುವೆನೆಂದೇ ತಿಳಿಯಬೇಕು. ಈ ಪ್ರೇಮದ ಫಲವಾಗಿ ಪರಸ್ಪರವಿರುದ್ಧಗಳಾದ ಎರಡೂ ಭಾವನೆಗಳು ಏಕಕಾಲದಲ್ಲುಂಟಾಗುವುವು."

"ಆಶ್ಚರ್ಯವು; ಪರಿಮಳಾ, ಅತ್ಯಾಶ್ಚರ್ಯವು. ಆದರೂ ಪ್ರೇಮವೆಂಬುದನ್ನು ನಾನು ಪೂರ್ಣವಾಗಿ ತಿಳಿದುಕೊಳ್ಳಬಲ್ಲೆನೆಂಬ ನಂಬಿಗೆಯಿದೆ."

"ಲೀಲಾ, ಅನೇಕ ವೇಳೆ ಸ್ನೇಹವು ಪ್ರೇಮವಾಗಿ ಪರಿಣಮಿಸುವುದು. ನನ್ನ ವಿಷಯದಲ್ಲಿಯೂ ಹೀಗೆಯೇ. ನಾನು ಪ್ರೀತಿಸುವ ವಸ್ತುವಿಗೂ ನನಗೂ ಬಹು ಸ್ನೇಹವಿದೆ. ಇನ್ನು ನನ್ನ ಪಾಲಿನ ಸ್ನೇಹವಂತೂ ಪ್ರೇಮವಾಗಿಬಿಟ್ಟಿದೆ."

"'ಪ್ರೇಮದಿಂದ ಪ್ರೇಮವು ಹುಟ್ಟುವುದು' ಎನ್ನುವರಲ್ಲವೇ? ಅದು ನಿಜವಾದರೆ ನಿನ್ನ ಕೋರಿಕೆಯು ಬೇಗನೆ ಈಡೇರಬಹುದು. ನಿನ್ನ ದುಃಖದಿಂದ ನನಗೆ ನೋವಾಗುವುದು. ಆದರೇನು ಮಾಡಲಿ? ಪರಿಮಳಾ, ನಾನೊಂದು ವೇಳೆ ಪುರುಷನಾಗಿದ್ದರೆ ನಿನ್ನನ್ನು ಮನಃಪೂರ್ವಕವಾಗಿ ಪ್ರೀತಿಸಿ ತಣಿಸುತ್ತಿದ್ದೆನು—ನಿನ್ನ ಪ್ರೇಮವನ್ನೂ ಅರಿತ ಮೇಲೆ ಕೇಳುವುದೇನು?"

"ಈ ಅಭಿಪ್ರಾಯಕ್ಕೆ ಕಾರಣವೇನು? ನನ್ನನ್ನು ಇಷ್ಟೇಕೆ ಉಬ್ಬಿಸುವುದು?"

"ಇದು ಉಬ್ಬಿಸುವುದಲ್ಲ. ಪರಿಮಳಾ, ನೀನು ಬಹು ಸುಂದರಳಾಗಿರುವೆ. ಇತರರ ಮನವನ್ನು ಕ್ಷಣಮಾತ್ರದಲ್ಲಿ ಸೆಳೆದುಬಿಡುವ ಶಕ್ತಿಗಳೆಲ್ಲವೂ ನಿನ್ನಲ್ಲಿವೆ. ಈಗ ನೋಡು,

ಎಲ್ಲರನ್ನೂ ಬಿಟ್ಟು ಅಪರಿಚಿತನಾದ ನಿನ್ನನ್ನು ನಾನು ಪ್ರೀತಿಸುತ್ತಿರುವುದೇಕೆ? ಸ್ವಲ್ಪದರಲ್ಲಿ ಹೇಳಬೇಕೆಂದರೆ, ನಿನ್ನನ್ನು ನೋಡುವುದೆಂದರೆ ನಿನ್ನನ್ನು ಪ್ರೀತಿಸುವುದು. ''

''ಲೀಲಾ, ನಿನ್ನ ವಾಕ್ಯಗಳೆಲ್ಲವೂ ನಿನಗೇ ಅನ್ವಯಿಸುತ್ತವೆ. ನಾನು ಪ್ರತ್ಯೇಕವಾಗಿ ಹೇಳಲಾರೆ. ನಿನ್ನನ್ನು ನೋಡುವುದೆಂದರೆ ನಿನ್ನನ್ನು ಪ್ರೀತಿಸಿದಂತೆಯೇ ಸರಿ. ನೀನು ಪ್ರೀತಿಸಿದವನ ಆತ್ಮಕ್ಕೆ ಯಾವಾಗಲೂ ಹಬ್ಬದೂಟವಲ್ಲದೆ ಬೇರಿಲ್ಲ. ''

''ನಾವಿಬ್ಬರೂ ಪರಸ್ಪರರನ್ನು ಪ್ರೀತಿಸುತ್ತೇವೆ. ಇದು ಸತ್ಯ. ''

''ಪ್ರಿಯೆ, ನಾನು ನಿನ್ನನ್ನು ಪ್ರೀತಿಸುತ್ತೇನೆ—ಇಷ್ಟೇ ಅಲ್ಲ, ಹೃದಯಸಿಂಹಾಸನದಲ್ಲಿ ಕೂರಿಸಿ ಅರ್ಚಿಸುತ್ತೇನೆ. ಇದು ನಮ್ಮ ಹೊಸ ಪರಿಚಯದ, ನಿನ್ನ ಸೌಂದರ್ಯ ಸೌಜನ್ಯಗಳ ಫಲವಲ್ಲ. ಏಕೆಂದರೆ ನೀನೇ ನನಗೆ ಪ್ರೇಮಯಾಚನೆಯನ್ನೀಯುವವಳು. ಈಗ ನಾವಿಬ್ಬರೂ ಪ್ರೇಮಿಗಳಾಗಿರುವುದರಿಂದ ಈ ನೆಲದಿಂದೊಬ್ಬ ಯಕ್ಷಿಣಿಯು ಎದ್ದು ಬಂದು ನಮ್ಮಿಬ್ಬರಲ್ಲೊಬ್ಬರನ್ನು ಪುರುಷನನ್ನಾಗಿಸಿದರೆ ನಮಗೆ ಅದೆಷ್ಟು ಸಂತೋಷವಾದೀತು !! ಅಲ್ಲವೇ ಲೀಲಾ?''

ಅದೇಕೋ ಲೀಲೆಗೆ ಒಂದು ತೆರನಾಯಿತು. ''ಪರಿಮಳಾ, ಇದೆಂಥಾ ವಿಚಿತ್ರಕಲ್ಪನೆಯೇ? ''

''ಬೇಡ, ವಿಷಾದಿಸಬೇಡ. ಕಲ್ಪನೆಯ ಮುಗಧಾಣವನ್ನು ಜಗ್ಗದೆ ಬೇಕಾದಂತೆ ಓಡಲು ಬಿಡುವವಳೆಂದು ಭಾವಿಸು. ಕಲ್ಪನಾಸೌಖ್ಯದಲ್ಲಿ ತೇಲಿ ಸ್ವರ್ಗಸೌಖ್ಯವನ್ನಿಲ್ಲಿಯೇ ಅನುಭವಿಸುವ ನಿನ್ನ ಮಿತ್ರಳನ್ನು ತಡವಬೇಡ.

ಒಂದು ವೇಳೆ ಯಕ್ಷಿಣಿಯೊಬ್ಬಳು ಬಂದು—"

"ತಡೆ, ಪರಿಮಳಾ, ತಡೆ. ನನಗೇಕೋ ಭಯವಾಗುತ್ತಿದೆ. ಏನೂ ತಿಳಿಯಂತಾಗುತ್ತಿದೆ. ಏನೋ ಸಂಶಯದಿಂದ ತಲ್ಲಣಗೊಳ್ಳುವಂತಾಗುತ್ತಿದೆ—"

"ಚೆಲುವೇ, ಇಂತಹ ಭ್ರಾಂತಿಯಿಂದ ಬೆದರಬೇಡ. ನನ್ನ ಕನಸರಿಕೆಯು ಸತ್ಯವಾಗುವುದೆಂದು ಹೆದರುವೆಯಾ? ಒಂದು ವೇಳೆ ಹಾಗಾದರೂ ನಿನಗೆ ದುಃಖವೆನಿಸಬಹುದೇ? ಆಗ ನೀನು ಹೇಳಲಿಲ್ಲವೇ ಪ್ರೇಮವೆಂಬುದನ್ನು ಅರಿಯೆನೆಂದು. ಆಗ ನಾನು ಈ ಲೋಕದ ಅತ್ಯಂತ ಶ್ರೇಷ್ಠ ಸೌಖ್ಯವೆಂಬುದು ನಿನಗೆ ಗೊತ್ತಿಲ್ಲವೆನ್ನಲಿಲ್ಲವೇ? ನೀನು ನನ್ನ ಸ್ನೇಹಿತಳೆಂದೆ. ಸ್ನೇಹವು ಪ್ರೇಮವಾಗುವುದೆಂದು ನಾನೆಂದೆ. ಒಂದು ವೇಳೆ ಯಕ್ಷಿಣಿಯೊಬ್ಬಳು ಬಂದು ನನ್ನನ್ನು ಗಂಡಸನ್ನಾಗಿಸಿದರೆ—ನನಗೆ ಅತಿ ಐಶ್ವರ್ಯವನ್ನಿತ್ತರೆ—ನಾನು ನಿನ್ನಡಿಯಲ್ಲುರುಳಾಡಿ ಪ್ರೇಮಭಿಕ್ಷೆಯನ್ನು ನೀಡೆಂದರೆ—ನೀನು ನನ್ನ ಅರ್ಧಾಂಗಿಯಾಗಿ ನನ್ನ ಜೀವನವನ್ನು ಬೆಳಗಿ ನೀನೂ ಕೃತಾರ್ಥಳಾಗೆಂದರೆ—ನನ್ನ ಪ್ರಾಣಪ್ರಿಯೆ, ಆಗ ನೀನೇನೆಂದು ಹೇಳುವೆ?"

ನಿದಾನವಾಗಿ ಶಿವಪ್ರಸಾದನು ತನ್ನ ಕತೆಯನ್ನು ಬೆಳೆಬೆಳೆಸಿದಂತೆ, ಲೀಲೆಯಲ್ಲಿ ತಲೆದೋರಿದ ಸಂಶಯದ ಬೀಜವು ಮೊಳೆತು, ಕುಡಿಯೊಡೆದು, ಕೊನೆಗೆ ಬೆಳೆದು, ಕೊಟ್ಟ ಕೊನೆಯ ಮಾತನ್ನು ಕೇಳಿದೊಡನೆಯೇ ಅವಳನ್ನು ನೆಲಕ್ಕುರುಳಿಸಿಬಿಟ್ಟಿತು. ಮೇಲಕ್ಕೇಳಲು ಶಕ್ತಿಯಿಲ್ಲದ—ನಿಸ್ಸಹಾಯಳಾದ ಅವಳು ಮೆಲ್ಲನೆ ಮೂಲೆಯಲ್ಲೊರಗಿಕೊಂಡಳು.

ಪರಿಮಳೆಯು ಸಮೀಪಕ್ಕೆ ಬರಲು, ಅವಳು ಸಿಟ್ಟಿಗೆದ್ದ ನಾಗಿಣಿಯಂತೆ ಬುಸುಗುಟ್ಟಿ, ರೊಚ್ಚಿಗೆದ್ದ ವ್ಯಾಘ್ರನಂತೆ ಗರ್ಜಿಸಿದಳು. "ನಿನ್ನ ನಿಜಸ್ಥಿತಿಯು ಏಕೋ ಮರೆಯಾಗಿರುವಂತಿದೆ. ನೀನಾರು ಮೊದಲು ಹೇಳು. ನೀನಿಲ್ಲಿಗೆ ಬೇಗೆ ಬಂದುದೇಕೆ?" ಎಂದು ಕೇಳಿದಳು.

ಶಿವಪ್ರಸಾದನು "ಮನಮೋಹಿನಿ, ಯಕ್ಷಿಣಿಯು ತನ್ನ ಕಾರ್ಯವನ್ನು ಪೂರೈಸಿದಳು!! ನಾನಿಲ್ಲಿ ಪ್ರೇಮಭಿಕ್ಷೆಯನ್ನು ಬೇಡಲು ಬಂದಿರುವ ಸೇವಕನು" ಎಂದನು.

---

# ನಿರ್ವಾಹವಿಲ್ಲದ ಪ್ರೇಮ

ಲೀಲೆಯು ಬೆಚ್ಚಿಬಿದ್ದಳು. ಭಯಾನಕ ಭವಿಷ್ಯದ ಕರಾಳಕಲ್ಪನೆಯು ಅವಳಲ್ಲಿ ನವಚೈತನ್ಯೋದಯವನ್ನುಂಟುಮಾಡಿತು. ಕೂಡಲೇ ಅವಳು ತನ್ನ ಅಂಗಾಂಗಗಳನ್ನು ವಸನದಿಂದ ಮುಚ್ಚಿಬಿಟ್ಟು, ಮೇಲಕ್ಕೆದ್ದು ನಿಂತಳು. ಗಂಡಾಂತರದಲ್ಲಿರುವ ಹಾವು ಮುಂಗುಲಿಯನ್ನೇ ಎದುರಿಸುವಂತೆ ಧೈರ್ಯದಿಂದಿದ್ದ ಇವಳ ಸ್ಥಿತಿಯಾಗಿತ್ತು.

"ನೀನಾರೇ ಆಗಿರು; ಮೊದಲು ಇಲ್ಲಿಂದ ಹೊರಹೊರಡು. ಇದು ನನ್ನಪ್ಪಣೆ" ಎಂದು ಸಿಡಿಲ್ನುಡಿಯನ್ನು ನುಡಿದುಬಿಟ್ಟಳು.

"ಆದರೂ ಪ್ರಿಯೆ, ನನ್ನ ಪ್ರಾಣವನ್ನಗಲೇನು ನಿನ್ನನ್ನು ಅಗಲಲಾರೆ! ನೀನು ನನ್ನನ್ನೊಪ್ಪುಬಿಡು; ಕೋಮಲ ಸ್ಪರ್ಶದಿಂದ ನನಗಾನಂದವೆನಿಸುವುದು. 'ಹೊರಹೊರಡು' ಎಂಬ

ಬಿರುಸರದಿಂದ ಸನ್ನೆದೆಯು ಬಿರಿಯಿತು. ದೇವಿ, ಪ್ರಸನ್ನ ಳಾಗು. ಇದರಿಂದ ನನಗೆ ಮಾತ್ರ ಹಿತವಾಗುವುದೆಂದು ತಿಳಿ ದಿರುವೆಯೊ?"

"ತಡೆ, ಇನ್ನು ಈ ಸಂಭಾಷಣೆಯನ್ನು ಬೆಳೆಸತಕ್ಕುದಲ್ಲ. ಅಯ್ಯೋ! ಸ್ತ್ರೀವೇಷಧಾರಿಯಾಗಿ ಬರುವುದೆಂಥಾ ಘಾತುಕ ತನ!! ಅದೆಂತಹ ಕ್ರೌರ್ಯ, ಹೇಡಿತನ, ಮೂರ್ಖತನ!!! ಇಗೋ! ಇದು ನನ್ನಾಜ್ಞೆ, ನೀನು ತೊಲಗು."

"ಪ್ರಿಯೆ, ಲೀಲಾ, ನಿನ್ನ ಪ್ರತಿಶಬ್ದವೂ ನನ್ನ ಪಾಲಿಗೆ ಗಲ್ಲಿನಂತಿರುವುದಲ್ಲ!! ಅಹುದು, ತಪ್ಪೆಲ್ಲಾ ನನ್ನದು, ತಪ್ಪು ಮಾಡುವುದು ಮಾನವತನ; ಕ್ಷಮಿಸುವುದು ದೇವತನ. ಚದುರೇ! ನಿನಗದು ಗೊತ್ತಿಲ್ಲವೇ? ನನ್ನನ್ನು ಕ್ಷಮಿಸುವಷ್ಟು ಕರುಣೆಯು ನಿನ್ನಲ್ಲಿ ಜನಿಸಬಾರದೇ? ಕೋಮಲಗಾತ್ರಳ ಹೃದಯವು ಕಠೋರವಾಗಿರುವುದುಂಟೇ? ಒಂದೆರಡು ಮಾತು ಕೇಳು. ನಾನು ನಾಡಾಡಿಯಲ್ಲ. ನಿನ್ನ ಸೌಂದರ್ಯದ ಕೀರ್ತಿಯನ್ನರಿತೆ; ನಿನ್ನನ್ನು ನೋಡುವುದಕ್ಕಿಂತಲೂ ಮೊದಲು ನಿನ್ನಲ್ಲಿ ನಾನು ಅನುರುಕ್ತನಾದೆ. ಒಂದು ಮುದ್ದಿ ಗಾಗಿ ಸಾವಿರ ಗುದ್ದುಗಳನ್ನು ಸಂತೋಷದಿಂದ ತಾಳಬಲ್ಲೆ. ನಾನಾರೆಂಬುದು ನಿನಗೆ ಗೊತ್ತಿಲ್ಲ. ನಾನೊಬ್ಬ ಅತಿ ಸುಪ್ರ ಸಿದ್ಧನು. ನಿನ್ನನ್ನು ಗಾಂಧರ್ವವಿಧಿಯಲ್ಲಿ ವಿವಾಹವಾಗಲೆಳ ಸಿರುವೆನು. ಇಗೋ! ನಿನ್ನ ಕಾಲಿನ ಮೇಲೆ ಬಿದ್ದಿದ್ದೇನೆ, ನನ್ನ ಹೃದಯಸಿಂಹಾಸನಾಧೀಶಳಾಗು. ಎಷ್ಟೋ! ಸಹಸ್ರ ಸುಂದರಿ ಯರ ಪರಿಚಿತನಾಗಿದ್ದರೂ ನನ್ನ ಮನವನ್ನು ಈ ಪರಿ ಯಾಗಿ ಯಾರೂ ಪರವಶಗೊಳಿಸಿದವರಿಲ್ಲ. ಲೀಲಾ, ಅನು ಮತಿಸು, ನಿನಗೊಂದು ಮಹಾಲಾಭವೆಂದು ಮುಂದೆ ಕಂಡು

ಬಂದೀತು."

"ಹಾಗಾದರೆ ನೀನಾರು? ನನ್ನನ್ನೀಗಲೂ ಮೋಸದ ಬಲೆಯಲ್ಲಿ ಕೆಡವಬೇಡ."

"ನಾನು ನಿನಗೆ ಪ್ರಿಯಪರಿಮಳೆಯಾದರೂ ಹೊರಗಿನವರಿಗೆ ಶಿವಪ್ರಸಾದನು."

ಅಷ್ಟರಲ್ಲೊಂದು ಕುದುರೆಯ ಬಂಡಿಯು ಬಂದು ಮನೆಯ ಮುಂದೆ ನಿಂತಿತು. ಲೀಲೆಯು ವಿಹ್ವಲೆಯಾಗಿ ಕಿಟಕಿಯಿಂದ ಇಣಿಕಿನೋಡಿದಳು.

"ಅಯ್ಯೋ ಪರಮಾತ್ಮಾ ಇದೇನು!! ತಂದೆಯು ಊರಿನಿಂದ ಬಂದುಬಿಟ್ಟನು. ತಾರೆಯು ಇಲ್ಲಿಲ್ಲ; ನಾನು—"

"ಲೀಲಾ, ಧೈರ್ಯದಿಂದಿರು. ಜೋಕೆ, ನಾನು ಬೇಡಿಕೊಳ್ಳುತ್ತೇನೆ—ಕಂಗೆಡಬೇಡ, ಶಾಂತಳಾಗಿರು. ಎಂದರೆ ಎಲ್ಲವೂ ಒಳಿತಾಗುವುದು."

ಈಗ ಲೀಲೆಯು ನಿರ್ವಾಹವಿಲ್ಲದೆ ತನ್ನ ಮಾನವನ್ನುಳಿಸುವ ಕಾರ್ಯದಲ್ಲಿ ಶಿವಪ್ರಸಾದನನ್ನೇ ಅವಲಂಬಿಸಬೇಕಾಯಿತು. "ಇದು ಹೇಗೆ ಸಾಧ್ಯ? ಈಗ ನಾನೇನು ಮಾಡತಕ್ಕದು?" ಎಂದು ಅತಿಕಾತರಳಾಗಿ ಕೇಳಿದಳು. ಏಕೆಂದರೆ ಹೊರಗೆ ಬಾಗಿಲನ್ನು ಬಡೆಯುವ ಕಾರ್ಯವೀಗ ಒತ್ತಾಯದಿಂದ ಸಾಗಿತ್ತು.

"ಪುನಃಪುನಃ ಹೇಳುತ್ತೇನೆ. ಲೀಲಾ, ಶಾಂತಳಾಗಿರು. ಮತ್ತು ನಾನು ಹೇಳುವುದನ್ನು ಲಕ್ಷ್ಯವಿಟ್ಟು ಕೇಳು."

"ಆಗಲಿ. ನನ್ನ ಗತಿಯೇನು?"

ತಾನೇ ಗತಿಯೆಂದು ಲೀಲೆಯು ನಂಬಿದುದನ್ನರಿತು ಶಿವಪ್ರಸಾದನಿಗೆ ಸಂತೋಷವೆನಿಸಿತು. "ನೀನೀಗ ಮಾಡ

ಬೇಕಾದ ಕಾರ್ಯಗಳೆರಡು; ನಿಮ್ಮ ತಂದೆಗೆ ನಿನ್ನಲ್ಲಿ ಸಂಶಯ ವುಂಟಾಗದಂತೆ ಮಾಡುವುದೊಂದು— ನಿನ್ನ ತಂಗಿಯ ರಹಸ್ಯಸ್ಫೋಟವಾಗದಂತೆ ಮಾಡುವುದೊಂದು."

"ಅಯ್ಯೋ, ಇದೇನು ಬಂತು!"

"ನನ್ನ ಅಭಿಪ್ರಾಯವೇನೆಂದರೆ ರಾತ್ರಿಯ ಸಮಯದಲ್ಲಿ ಯುವತಿಯರು ಮನೆಯಲ್ಲಿಲ್ಲದಿರಲು ಹಿರಿಯರಿಗೆ ಸಹಜವಾಗಿ ಸಿಟ್ಟುಬರುವುದು. ಈಗ ನೀನು ಹೀಗೆ ಮಾಡತಕ್ಕದು; ತಾರೆಯು ಇಲ್ಲಿಯೇ ಇರುವಳೆಂದು ನಿಮ್ಮ ತಂದೆಯ ಭಾವನೆ ಯಾಗಬೇಕು— ಅವನು ಮಾತ್ರ ಇಲ್ಲಿಗೆ ಬರಬಾರದು. ಇನ್ನು ಹೊರಡು."

* * *

ಎತ್ತರನೂ ಭವ್ಯನೂ ಆದ ವೆಂಕಟರಾಯನಿಗೆ ಸುಮಾರು ೫೪ ವರ್ಷಗಳು. ಉಜ್ವಲನೇತ್ರನಾದ ಇವನ ಅವಯವಗಳು ಕಲ್ಲು ಕಬ್ಬಿಣಗಳಿಂದ ಮಾಡಲ್ಪಟ್ಟಿರುವುದರಿಂದ ಕಾಲ ಪುರುಷನ ದುರುಳತನವು ಸಾಗದಿರಲು ಅವನು ಚಿಂತೆಯ ಸಹಾಯವನ್ನು ಪಡೆದನಂತರ ಹುಬ್ಬುಗಳನ್ನು ಕೆಲಮಟ್ಟಿಗೆ ಸುಕ್ಕುಗಟ್ಟುವ ಕಾರ್ಯವು ಸಾಧಿಸಿತು.

* ಲೀಲೆಯು ಅಲ್ಲಿದ್ದೊಂದೇ ದೀಪವನ್ನು ತೆಗೆದುಕೊಂಡು ಕೆಳಗಿಳಿದುಬಂದಳು. ಶಿವಪ್ರಸಾದನು ಶಯ್ಯಾಗಾರದಲ್ಲಿ ಒಂಟಿಯಾಗುಳಿದುಬಿಟ್ಟನು.

ಅತ್ಯವಸರದಿಂದ ಬಾಗಿಲನ್ನು ತೆರೆದೊಡನೆಯೇ ವೆಂಕಟ ರಾಯನು ಮಗಳ ಸಮೀಪಕ್ಕೆ ಬಂದು, "ಪ್ರೀತಿಯ ಪುತ್ಥ ಳಿಯೇ, ನಾನು ಸಂತೋಷವಾರ್ತೆಯನ್ನು ತಂದಿದ್ದೇನೆ. ಇಷ್ಟು ಜಾಗ್ರತೆಯಾಗಿ ಇಂತಹ ಅವೇಳೆಯಲ್ಲಿ— ನಾನು

ಹಿಂದಿರುಗಿ ಬರುವೆನೆಂದು ನೀವು ಭಾವಿಸಿರಲಿಕ್ಕಿಲ್ಲ" ಎಂದನು.

"ಅಪ್ಪಾ, ನೀನಿಲ್ಲದಾಗ ನನ್ನನ್ನು ಕಣ್ಣುಕಟ್ಟಿ ಬಿಟ್ಟಂತಾಗಿತ್ತು. ನೀನು ಕ್ಷೇಮದಿಂದ ಬಂದುದನ್ನು ಕಂಡು ಅತ್ಯಾನಂದವಾಗಿದೆ" ಎಂದು ಲೀಲೆಯು ತನ್ನ ಅಂತಹ ಪರಿಸ್ಥಿತಿಯನ್ನು ಕ್ಷಣಕಾಲ ಮರೆತು ಉತ್ಸಾಹದಿಂದ ನುಡಿದಳು.

ಸೇವಕನು ಸಾಮಾನುಗಳನ್ನು ತಂದಿಡಲು, ವೆಂಕಟರಾಯನು ಗಾಡಿಯವನ ಬಾಡಿಗೆಯನ್ನು ಕೊಟ್ಟು ಲೀಲೆಯೊಡನೆ ನಡುಮನೆಗೆ ನಡೆದನು.

ಲೀಲೆಯು ಫಲಾಹಾರವನ್ನಾದರೂ ತೆಗೆದುಕೊಳ್ಳೆನ್ನಲು, ತಾನು ದಾರಿಯು ಸರಿಯಿಲ್ಲದಿದ್ದುದರಿಂದ ಬಹು ಆಯಾಸಪಟ್ಟಿರುವುದಾಗಿಯೂ ತನಗೆ ವಿಶ್ರಾಂತಿಯು ಆಹಾರಕ್ಕಿಂತಲೂ ಅತ್ಯವಶ್ಯವಾಗಿರುವುದಾಗಿಯೂ ಹೇಳಲು ಲೀಲೆಯು ಹಾಸಿಗೆಯನ್ನು ಹಾಸಲುದ್ಯುಕ್ತಳಾದಳು.

ತಾರೆಯೆಲ್ಲಿ ಎಂದು ಅವನು ಕೇಳಲು, ಅವಳು ನಿದ್ದೆಯಲ್ಲಿರುವಳೆಂದು ಲೀಲೆಯು ಹೇಳಿದಳು. ಅಂತಹ ಅಪರಾತ್ರಿಯಲ್ಲಿ ಅವಳನ್ನೆಬ್ಬಿಸುವ ಅವಶ್ಯವಿಲ್ಲವೆನ್ನುವುದರೊಳಗಾಗಿ "ಅಪ್ಪಾ, ಸಂತೋಷದ ಸುದ್ದಿಯೊಂದನ್ನು ಹೇಳುವೆನೆಂದು ನೀನೆನ್ನಲಿಲ್ಲವೇ?" ಎಂದು ಲೀಲೆಯು ಕೇಳಲು ಇನ್ನು ಕೆಲವು ತಾಸುಗಳಲ್ಲಿಯೇ ಬೆಳಗಾಗುವುದರಿಂದ ಎಲ್ಲವನ್ನೂ ಆಗ ವಿವರಿಸುವೆನೆಂದು ವೆಂಕಟರಾಯನು ಹೇಳಿದನು.

ಅವನು ಮಲಗಿಕೊಂಡ ಮರುಕ್ಷಣದಲ್ಲಿಯೇ ಭಯವಿಹ್ವಲಳೂ ಪುಳಕಿತಕಾಯಳೂ ಆದ ಲೀಲೆಯು ತನ್ನ ಶಯ್ಯಾಗಾರದೆಡೆಗೆ ದೀಪವನ್ನು ತೆಗೆದುಕೊಂಡು ಹೋದಳು.

* * *

ಈ ೧೫-೨೦ ನಿಮಿಷಗಳ ಅವಧಿಯಲ್ಲಿ ಶಿವಪ್ರಸಾದನ ಮನಃಸ್ಥಿತಿಯಲ್ಲಿ ಬಹು ಬದಲಾವಣೆಯಾಗಿತ್ತು. ಲೀಲೆಯು-ಕುಟಿಲತೆಯನ್ನು ಕನಸಿನಲ್ಲಿ ಸಹ ಕಾಣದ ಲೀಲೆಯು—ಪರಿಮಳೆಯು ಪ್ರಾಣಪ್ರಿಯಳಾದ ರಮಣಿಯೊಬ್ಬಳೆಂದು ನಂಬಿ ಮುಚ್ಚುಮರೆಯಿಲ್ಲದೆ ಮೇಲಿಂದ ಮೇಲೆ ತನ್ನಂಗದ ಚೆಲ್ವಿಕೆಯನ್ನು ಹೊರಸೂಸಿದುದೇ ಇದಕ್ಕೆ ಕಾರಣವಾಗಿತ್ತು. ಅವಳ ಅಂಗಾಂಗಗಳ ಕಡುಸೊಗವನ್ನು ನೆನೆನೆನೆದಂತೆಲ್ಲಾ ಶಿವಪ್ರಸಾದನು ಹುಚ್ಚುಹುಚ್ಚಾಗಹತ್ತಿದನು. ಸರಳ ಸ್ವಭಾವದ ಮುಗ್ಧೆಗಾಗಿ ಮರುಗುವನು; ತನ್ನ ಜಾಣ್ಮೆಗಾಗಿ ನಗುವನು. ಅವನ ಅಂತಹ ಪರಿಸ್ಥಿತಿಯ ಪರಿಣಾಮವಾಗಿ ನವರಸಗಳೂ ಅವನ ಮೊಗದಲ್ಲಿ ಮೂಡಿದ್ದುವು. ಅವಳು ನಿರ್ವಾಹವಿಲ್ಲದೆ ತನ್ನ ಬಳಿಗೇ ಬಂದುಬಿಡುವಳೆಂದೂ ಇಂತಹ ಸಂಧಿಯನ್ನು ಬಿಟ್ಟರೆ ಪುನಃ ಕಾರ್ಯವು ಕೈಗೂಡದೆಂದೂ ಚಿಂತಿಸಲಾರಂಭಿಸಿದನು.

ಇವನಿಂತಿರುವಾಗ ಲೀಲೆಯು ಬಂದಳು. ಅವಳೀಗ ಶಾಲಿನಿಂದ ಸಂಪೂರ್ಣವಾಗಿ ಆಚ್ಛಾದಿತಳಾಗಿದ್ದರೂ ಕಲ್ಪನಾಶಿಖರವನ್ನೇರಿದ ಶಿವಪ್ರಸಾದನು ಅವಳನ್ನು ಹುಟ್ಟುರೂಪದಲ್ಲಿರುವಂತೆಯೇ ಭಾವಿಸಿ ನೋಡಿದನು. ಅವಳು ದೀಪವನ್ನು ದೂರದಲ್ಲಿಟ್ಟು, ಬಾಗಿಲನ್ನು ಮುಚ್ಚಿ, ಇವನ ಸಮೀಪಕ್ಕೆ ಬಂದು ನುಡಿದಳು:

"ಅಯ್ಯಾ, ಮಾನವನು ಪ್ರಾಣಿಶ್ರೇಷ್ಠನು. ಉಪಕಾರವನ್ನು ಮಾಡಿದವರಿಗೆ ಮೊಸಳೆಯಂತೆ ಅಪಕಾರವನ್ನು ಮಾಡಬಾರದು. ನೀನೀಗ ಸದ್ಗೃಹಸ್ಥನೊಬ್ಬನ ಅತಿಥಿಯಾಗಿರುವೆ. ಅವನ ಮಗಳು ನಿನ್ನ ದಯೆ, ನಿನ್ನ ಔದಾರ್ಯ

ಇವುಗಳನ್ನೇ ಅವಲಂಬಿಸಿರುವಳು. ಅವಳ ಮಾನವನ್ನು ನೀನು ಉಳಿಸಲೇ ಬೇಕಷ್ಟೇ?''

ಶಿವಪ್ರಸಾದನು ಅವಳ ನೇರೆಯ ಮಾಟವನ್ನು ಮೆಚ್ಚು ವುದರಲ್ಲಿ ವೈಮರೆತಿದ್ದನು. ಬಹುಶಃ ಅವಳಾಡಿದ ಮಾತು ಕೇಳಿರಲಿಕ್ಕಿಲ್ಲ; ಸುಮ್ಮನಿದ್ದನು.

''ನಿರಪರಾಧಿಗಳಾದ ಮೀನುಗಳನ್ನು ಬೆಸ್ತರು ಬೇಟೆ ಯಾಡುವಂತೆ ಅಬಲೆಯರ ಸ್ಥಿತಿಯಾಗಿದೆ. ಗಂಡಾಂತರ ಕ್ಕೀಡಾದವರು ಮಾಡಬಾರದ ಕೆಲಸವನ್ನು ಮಾಡುವರು. ನಾನು ಅಪರಿಚಿತರಾದ ನಿಮ್ಮಲ್ಲಿ ನಂಬಿಗೆಯಿಟ್ಟು, ತಾರೆಯು ಇಲ್ಲಿಯೇ ಇರುವಳೆಂದು ತಂದೆಯನ್ನು ನಂಬಿಸಿದುದು ಎಂತಹ ಅಪರಾಧ! ಆದರೂ ಇದೇ ಮೊದಲಿನದು ಹಾಗೂ ಕೊನೆ ಯದು.''

''ಆದರೆ ಲೀಲಾ, ತಾರೆಯ ವಿಷಯದಲ್ಲಿ ನಿಮ್ಮ ತಂದೆಯು ಸಂಶಯವನ್ನು ತಾಳದಂತೆ ಮಾಡಿದುದು ಸಾಮಾನ್ಯವೊ?''

''ತನ್ನ ಮಗಳ ವಿಷಯವಲ್ಲಿ ಅವನೇಕೆ ಇಲ್ಲದ ಸಂಶಯ ವನ್ನು ತಾಳುವನು? ತಾರೆಯು ತಾನಿಲ್ಲದುದರ ಕಾರಣ ವನ್ನು ವಿವರಿಸದಿರುವಳೊ?''

ಶಿವಪ್ರಸಾದನು ಅವಳಲ್ಲಿ ಪ್ರೇಮವೆಂಬ ವಿದ್ಯುತ್ಸಂಚಾರ ವನ್ನುಂಟುಮಾಡುವ ಮೂಲಕವಾಗಿ ತಾನು ವಿಜಯವನ್ನು ಸಂಪಾದಿಸಬೇಕೆಂದು ಬಗೆದನು.

''ಪ್ರಿಯಲೀಲಾ, ಹಾಗಲ್ಲ! ತಾರೆಯು ಇಡೀ ರಾತ್ರಿಯ ನ್ನೆಲ್ಲಿಯೋ ಕಳೆಯುವುದರ ಕಾರಣವನ್ನು ಸಮರ್ಪಕವಾಗಿ ಉಸುರಲಾರಳು.''

''ಎಲಾ, ಇದೇನು? ದೇವರೇ ಗತಿ. ನನ್ನ ತಂಗಿಯೇ

ಮಾನಹಾನಿಯಾಗುವಂತೆ ನುಡಿಯುವ ಧೈರ್ಯವು—"

"ಇಗೋ, ನಾನೇನೂ ಬಚ್ಚಿಡುವುದಿಲ್ಲ; ಆದರೂ ಕ್ಷಮಿಸು. ಇದರಲ್ಲಿ ನನ್ನ ದುರುದ್ದೇಶವೇನೂ ಇಲ್ಲ. ನಾನು ನಿನ್ನ ಮಿತ್ರನಂತೆ—ಬಂಧುವಿನಂತೆ—ಪತಿಯಂತೆ ಮನ ಬಿಚ್ಚಿ ನುಡಿಯುತ್ತೇನೆ. ನೀನು ಸಾವಧಾನದಿಂದ ಕೇಳು."

"ಹಾಗಾದರೆ ಅದೇನು? ಹೇಳಿ, ನಿಜವನ್ನು ಮಾತ್ರ ಹೇಳಿ."

"ತಾರೆಯು ಮೋಹಪಾಶಬದ್ಧಳಾಗಿದ್ದಾಳೆ. ಇದು ನಿಜ, ಸತ್ಯ, ದಿಟ."

"ತಾರೆಯೇ? ಮೋಹವೇ? ಇದು ಸುಳ್ಳೇ ಸುಳ್ಳು."

"ಸರಳಸುಂದರಿಯೇ, ಇದು ಆಚ್ಚರಿಯೇ? ಇದ್ದಕ್ಕಿದ್ದಂತೆ ನೀನು ಪ್ರೇಮಲೀಲೆಯಲ್ಲಿ ಅಡಿಯಿಟ್ಟಿರುವಂತೆ, ಅವಳೂ ಒಂದು ಸಾಹಸದಲ್ಲಿರುವಳು. ಹಾಗೂ ಇಲ್ಲದ ಕಥೆಯೊಂದನ್ನು ಹೇಳಿ ನಿನ್ನನ್ನು ಠಕ್ಕಿಸಿರುವಳು."

"ಇದು ನಿಜವಿರಬಹುದೇ!! ಇಲ್ಲ, ಇಲ್ಲ, ನಿಜವಲ್ಲ; ನಿಜವಾಗುವುದೂ ಬೇಡ. ತಾರೆಯು ಯಾವುದನ್ನೂ ನನಗೆ ತಿಳಿಸದಿರುವುದಿಲ್ಲ, ಠಕ್ಕಿಸುವುದಂತೂ ಅಸಂಭವ."

"ಲೀಲಾ, ತಾರೆಯು ಬಂದೊಡನೆ ಈ ರಾತ್ರಿಯಲ್ಲಿ ನಡೆದು ದೆಲ್ಲವನ್ನೂ ಹೇಳಿಬಿಡು, ಇದರಲ್ಲಿ ಅಭ್ಯಂತರವೇನೂ ಇಲ್ಲ ವಷ್ಟೆ?"

"ಈಗ ನನಗೆ ಹೊಳೆಯಿತು. ಪ್ರೇಮವಿಷಯವನ್ನು ತಾರೆಯು ಮುಚ್ಚಿಡುವ ಸಂಭವವಿದೆ. ಪ್ರೇಮವನ್ನು ಪ್ರಕಟ ಗೊಳಿಸುವುದು ಎಂತಹ ಸರಳಹೃದಯದವರಿಗೂ ಸಾಧ್ಯ ವಿಲ್ಲ."

"ನೀನೂ ಹಾಗೆಯೇ. ಅವಳೀಗ ಪ್ರೇಮವೆಂಬ ಸಿಚ್ಚಣಿಕೆಯು ಕೈಗೆ ಸಿಕ್ಕೊಡನೆ ಭೂಮಿಯಿಂದ ಗಗನಕ್ಕೇರಿ ಹೋಗಿರುವಳು. ನಿನಗಾದರೋ ಸ್ವರ್ಗವು ಕಣ್ಣಿಗೆ ಕಾಣುತ್ತಿದೆ ಮಾತ್ರ, ಏಣಿಯನ್ನೇರಿ ಹೋಗಿಬಿಡು."

"ಬೇಡ, ಇಂತಹ ಮಾತು ಬೇಡ. ನಾನಿಲ್ಲಿಂದ ಹೊರಟೆ."

"ಜೋಕೆ, ನಿಮ್ಮ ತಂದೆಗೆ ಎಚ್ಚರವಾದೀತು!!"

"ಅಹುದು, ಒಂದು ವೇಳೆ ಅವಳು ಬಾರದಿದ್ದರೆ ಅವನೇನೆಂದಾನು? ನಿಮಗೆ ಅವಳ ವಿಚಾರದಲ್ಲಿ ಏನೋ ತಿಳಿದಂತಿದೆ. ಇದ್ದುದನ್ನು ಹೇಳಿಬಿಡಿ. ಎಲ್ಲ ವಿಧದಿಂದಲೂ ನಾನೀಗ ನಿಮ್ಮನ್ನೇ ನಂಬಿದ್ದೇನೆ."

"ಅಪ್ಸರೇ, ಇಲ್ಲಿ ನೋಡು."

"ಅಯ್ಯೋ, ನನನ್ನು ನೋಯಿಸುವ ನುಡಿಗಳನ್ನು ನುಡಿಯಬೇಡಿರಿ."

"ಹಾಗಾದರೆ ನೀನು ನನ್ನಲ್ಲಿ ಅನುರಕ್ತಳಾಗಿಲ್ಲವೋ? ಪ್ರೇಮವೆಂಬ ಬಹುಮಾನವನ್ನಿತ್ತರೆ ನಿಮ್ಮಿಬ್ಬರಲ್ಲಿಯೂ ನಿಮ್ಮ ತಂದೆಗೆ ಸಂಶಯವುಂಟಾಗದಂತೆ ಮಾಡುವೆನು. ನಿಮ್ಮಿಬ್ಬರ ಮಾನವೂ ಉಳಿಯುವುದು."

"ಹಾಗಾದರೆ ಈಗೇನು ಮಾಡತಕ್ಕುದು?"

"ಮೊದಲು ಶಿವಪ್ರಸಾದನೆಂದೇ ನನ್ನನ್ನು ಕರೆ. ನೀನು ಪ್ರೇಮಿಸುವುದು ಈಗ ಸ್ಪಷ್ಟವಾಯಿತು."

"ಶಿವಪ್ರಸಾದರೇ, ನೀವೀಗ ಹೀಗೆ ಮಾಡತಕ್ಕುದು. ನಿಶ್ಶಬ್ದವಾಗಿ, ಬಹು ಜೋಕೆಯಿಂದ ತಾರೆಯಿರುವೆಡೆಗೆ ಹೋಗಿ, ಇದ್ದಕ್ಕಿದ್ದಂತೆ ತಂದೆಯವರು ಬಂದಿರುವು

ದಾಗಿಯೂ, ಅವಳು ತಕ್ಷಣದಲ್ಲಿಯೇ ಹಿಂದಿರುಗಿ ಬರ ಬೇಕಾಗಿಯೂ, ನಾನು ಅವಳ ಕಾರ್ಯಗಳೆಲ್ಲವನ್ನೂ ಸಂಪೂರ್ಣವಾಗಿ ಗುಪ್ತವಾಗಿಡುವುದಾಗಿಯೂ ತಿಳಿಸಬೇಕು. ನೀವೀ ಕಾರ್ಯವನ್ನು ನನ್ನ ದೆಸೆಯಿಂದ ಮಾಡಿಯೇ ಮಾಡುವಿರಲ್ಲವೇ ?"

"ದೇವರಾಣೆಗೂ ಮಾಡುತ್ತೇನೆ. ನೀನು ಮಾತ್ರ ಬಹು ಮಾಸವನ್ನೀಯದಿರಲಾಗದು. ಎಲ್ಲ ವಿಧದಿಂದಲೂ ನಿನ್ನ ಕೃಪೆಯನ್ನೇ ನಿರೀಕ್ಷಿಸುತ್ತಿದ್ದೇನೆ."

"ಈಗಾಗಲೇ ಎರಡು ಗಂಟೆಯಾಯಿತು. ನಮ್ಮ ತಂದೆಯು ಏಳುವುದರೊಳಗಾಗಿ ಈ ಕಾರ್ಯವನ್ನು ಸಾಧಿಸತಕ್ಕದು. ನೀವು ಇನ್ನೊಮ್ಮೆ ಬರುವಾಗ ನಿಮ್ಮ ಶ್ರೀಮಂತಿಕೆಯ ಪುರುಷ ಪೋಷಾಕಿನಿಂದಲೇ ಬರಬೇಕು. ಜತನ."

ಈಗ ತಾನು ಕಾಮವಿಕಾರವನ್ನು ವ್ಯಕ್ತಪಡಿಸಿದರೆ ಕಂಗೆಟ್ಟ ಲೀಲೆಯು ಕೈವಶಳಾಗಳೆಂದೂ, ಅವಳು ತಂದೆಯನ್ನೆಬ್ಬಿಸಿ ತನ್ನ ಮೋಸವನ್ನು ವಿವರಿಸಿ ತನ್ನ ತಪ್ಪನ್ನೊಪ್ಪಿಕೊಂಡು ಆವನ ಕಾಲಿನ ಮೇಲೆ ಅವಳುರುಳುವ ಸಂಭವವಿದೆಯೆಂದೂ, ಪಾಪಭೀರುವಾದ ಇವಳು ವಚನಭ್ರಷ್ಟಳಾಗಳೆಂದೂ ಶಿವ ಪ್ರಸಾದನು ಭಾವಿಸಿದನು.

"ನಾನು ಪುನಃ—ಆದಷ್ಟು ಬೇಗನೆ—ಇಲ್ಲಿಗೆ ಬರುವುದು ನಿನಗಿಷ್ಟವಷ್ಟೇ ?"

"ಅದರಿಂದ ನನಗಾನಂದವಾಗುವುದು. ಆದರೆ ಯಾವ ನೆಪದಿಂದ ನೀವಿಲ್ಲಿಗೆ ಬರುವಿರಿ ? ಇದಲ್ಲದೆ ನೀವು ಬಂದಾಗ ನಾವಿಬ್ಬರೂ ಸಂಪೂರ್ಣ ಅಪರಿಚಿತರಂತಿರತಕ್ಕದೆಂಬು ದನ್ನು ನೀವು ಮರೆಯಲಾಗದು."

"ನಿಮ್ಮಪ್ಪನು ಅಚ್ಯುತರಾಯನ ಆಪ್ತನಲ್ಲವೋ? ನಾನು ಅವನಿಂದೊಂದು ಪತ್ರವನ್ನು ತೆಗೆದುಕೊಂಡು ಬರುವೆನು. ನಾನು ಬಂದುದರ ಕಾರಣವನ್ನು ತಾರೆಗೆ ನಾನೇನೆಂದು ಹೇಳಬೇಕು?"

"ನಾನು ಅವಳಿಗೆ ನಾಳೆ ಹೇಳುವುದೆಲ್ಲವನ್ನೂ ಹೇಳಿಬಿಡಬೇಕು. ಒಂದು ದುರುದ್ದೇಶವಿಟ್ಟುಕೊಂಡು ನೀವು ವೇಷಾಂತರಿಸಿ ನನ್ನಲ್ಲಿಗೆ ಬಂದಿರೆಂದೂ, ನಾನದನ್ನು ಕಂಡು ಹಿಡಿದು ನಿಮ್ಮಂತಹರಿಗೆ ಒಪ್ಪತಕ್ಕ ನಡತೆಯಿದಲ್ಲವೆನ್ನಲು ನೀವು ಕ್ಷಮಾಪಣೆಯನ್ನು ಬೇಡಿದಿರೆಂದೂ, ಮಾತಿನ ಭರದಲ್ಲಿ ತಾರೆಯು ಅಡ್ಡದಾರಿಯನ್ನು ತುಳಿದುದು ಆಕಸ್ಮಿಕವಾಗಿ ನಿಮಗೆ ಗೊತ್ತಾಯಿತೆನ್ನಲು ಅವಳನ್ನು ಹೇಗಾದರೂ ರಕ್ಷಿಸಿರೆಂದು ನಾನು ಪ್ರಾರ್ಥಿಸಿದೆನೆಂದೂ, ನಾನವಳಗೆ ಹೇಳುವೆನು. ನೀವು ಮಾತ್ರ ಶಯ್ಯಾಗಾರದಲ್ಲಿದ್ದ ವಿಚಾರವನ್ನೆತ್ತಬಾರದು. ಏಕೆಂದರೆ ಅವಳು ನನ್ನ ವಿಷಯದಲ್ಲಿ ಸಂಶಯಿಸುವ ಸಂಭವವಿದೆ."

"ಅರ್ಧರಾತ್ರಿಯಾದ ಮೇಲೆಯೇ ನಿನ್ನ ತಂದೆಯು ಇಲ್ಲಿಗೆ ಬಂದನೆಂದು ನಾನು ತಿಳಿಸಿದರೆ ಇದುವರೆಗೂ ನಾನೆಲ್ಲಿ ಅಡಗಿಕೊಂಡಿದ್ದೆನೆಂದು ಅವಳು ಚಕಿತಳಾಗಬಹುದು. ಇದಕ್ಕೇನು ಹೇಳುವುದು? ನಾನು ಹಿತ್ತಿಲಿನಿಂದ ಬಂದು, ಬಚ್ಚಲಮನೆಯ ಸಮೀಪದಲ್ಲಿರುವಾಗ ನಿಮ್ಮ ತಂದೆಯು ಮುಂಚಿಯ ಕಡೆಯಿಂದ ಬಂದನೆಂದು ಹೇಳಬಹುದಲ್ಲವೇ?"

"ಅದು ಸರಿ. ತಾರೆಯನ್ನು ಬರಮಾಡುವ ಭಾರವೀಗ ನಿಮ್ಮ ಮೇಲೆಯೇ ಇದೆ. ನೀವೆಷ್ಟು ತ್ವರಿತ ಗತಿಯಿಂದ ಹೋಗಬಲ್ಲಿರೋ ಅಷ್ಟರಮಟ್ಟಿಗಿನ ಆನಂದವು ನನಗಾಗ

ವುದು. ನಮಸ್ಕಾರ. "

" ಲೀಲಾ, ಇಗೋ ಹೊರಟೆ. ನೀನು ನಿಶ್ಚಿಂತಳಾಗಿರು. "

ಪರಿಮಳೆಯು ಹೊರಟುಹೋದಳು. ಲೀಲೆಯು ಶಯ್ಯಾಗಾರದಲ್ಲಿ ಬಂದೊರಗಿಕೊಂಡಳು. ಅವಳ ಕನಸಿನಲ್ಲಿ ತಾರೆಯ ತಂತ್ರವು ತೋರಿಬರಲು ಕಂಗೆಡುವಳು; ತಂದೆಯೆದ್ದು ತಾರೆಯನ್ನು ಕರೆದಂತಾಗಲು ಕಡುನಡುಗುವಳು.

ಇಂತಹ ಪರಿಸ್ಥಿತಿಯಲ್ಲಿ ವನಿತಾವೇಷದಿಂದೊಪ್ಪುತ್ತಿದ್ದ ಶಿವಪ್ರಸಾದನ ಪ್ರಸನ್ನವದನವು ಅವಳ ಕಣ್ಣಿನ ಮುಂದೆ ಬಂದು ನಿಲ್ಲುತ್ತಿತ್ತೋ ?

ಪುನಃಪುನಃ ಬಂದು ನಿಲ್ಲುತ್ತಿತ್ತೆಂದು ನಮ್ಮ ಭಾವನೆ.

---

## ಅಪರಿಚಿತಳೊಡನೆ ವಿವಾಹ

ಮಧ್ಯಾನ್ಹ ನಾಲ್ಕು ಗಂಟೆಯ ಸುಮಾರಿಗೆ ವೀರಪ್ಪನಿಗೆ ಎಚ್ಚರವಾಯಿತು. ಬೆಳಗುಮುಂಜಾವಿನ ಸಂಧಿವಾತವು ವೈದ್ಯೋಪಚಾರದಿಂದ ಹಿಮ್ಮೆಟ್ಟಿತ್ತು. ಇಂದ್ರಭವನದ ಸೇವಕನೊಬ್ಬನು ಇವನ ಬಳಿಗೆ ಬಂದು ಶೇಷಯ್ಯಶೆಟ್ಟರು ಇವನನ್ನು ನೋಡಲೆಂದು ಬಂದಿದ್ದರೆಂದೂ, ಬಹಳ ಹೊತ್ತಿನ ವರೆಗೂ ಇವನಿಗೆ ಎಚ್ಚರವಾಗಲಿಲ್ಲವಾದುದರಿಂದ ರೋಗಿಯನ್ನೆಬ್ಬಿಸುವುದು ಒಳ್ಳೆಯದಲ್ಲವೆಂದುಕೊಂಡು ಅವರು ಹಿಂದಿರುಗಿ ಹೋದರೆಂದೂ ತಿಳಿಸಿದನು.

ವೀರಪ್ಪನು ಅತಿ ಉದ್ವಿಗ್ನ ಚಿತ್ತನೆಂಬುದನ್ನು ನಮ್ಮ ವಾಚಕರೀಗಾಗಲೇ ಅರಿತಿರುವರು. ಅವನ ಹಸ್ತಗತವಾದ ಕಾಗದ

ವೊಂದರ ಸಹಾಯದಿಂದ ಕೆಲವು ಸಂಗತಿಗಳನ್ನು ಈಗಲೇ ಹುಡುಕಿ ತಿಳಿಯಬೇಕೆಂದು ಅವನು ಬಗೆದನೆಂದರೆ ಯಾರಿಗೂ ವಿಚಿತ್ರವೆನಿಸಲಿಕ್ಕಿಲ್ಲ.

ವೀರಪ್ಪನು ಆ ಕಾಗದದಲ್ಲಿಯ ಪ್ರತಿಶಬ್ದವನ್ನೂ ವಿಚಾರ ಪೂರ್ವಕವಾಗಿ ನಿಧಾನವಾಗಿ ಪುನಃ ಓದಿದನು:

"ನೆಲಮನೆಯ ಬಲಗಡೆಯ ದೂರಿನ ಮೂಲೆಯಲ್ಲಿಯ ಕಲ್ಲಿನ ಕೆಳಗೆ ನೋಡು. ಸುಂದರೀ, ಅದನ್ನು ಜಾಣತನ ದಿಂದ ಉಪಯೋಗಿಸು; ಎಂದರೆ ನಿನ್ನ ಉದ್ಧಾರವಾಗು ವುದು, ಇಲ್ಲದಿದ್ದರೆ ಅಧಃಪತನ."

ಹಿಂದಿನ ಕ್ರೂರ ರಾತ್ರಿಯಲ್ಲಿ ಸಂದರ್ಶಿಸಿದ ಆ ಸಾಯುವ ಮುದುಕನ ಪತ್ರವಿದೆಂದು ವೀರಪ್ಪನು ತಿಳಿದನು. ಅವಳು ಕೃತಘ್ನಳೆಂದು ಕರೆದ ಸುಂದರಿಯನ್ನುದ್ದೇಶಿಸಿಯೇ ಈ ಪತ್ರವು ಬರೆಯಲ್ಪಟ್ಟಿತ್ತು. ಅದು ಭೂಗತನಿಧಿಯನ್ನಲ್ಲದೆ ಬೇರೆ ಏನನ್ನು ಸೂಚಿಸಬಲ್ಲುದು?

ವೀರಪ್ಪನು ಮನದಲ್ಲಿಯೇ ಮಂಡಿಗೆಯನ್ನು ಮಾಡಲಾರಂ ಭಿಸಿದನು. ಆ ಮುದುಕನು ಮಹಾಲೋಭಿಯಾಗಿರಬೇಕು— ಸುಂದರಿಯೊಬ್ಬಳೇ ಅವನ ವಾರಸುದಾರಳಾಗಿರಬೇಕು. ಈ ಪತ್ರದಿಂದ ಸಿದ್ಧವಾಗುವುದೇನೆಂದರೆ, ಅವಳಿಗೆ ತಂದೆಯ ಬಳಿಯಲ್ಲಿ ಧನವಿರುವುದೆಂದು ಒಂದು ವೇಳೆ ಗೊತ್ತಿದ್ದರೂ ಸಹ ಅದೆಲ್ಲಿರುವುದೆಂಬುದು ತಿಳಿಯಲಸಾಧ್ಯವು. ಒಂದು ವೇಳೆ ತಾನು ಸುಂದರಿಯರಿಯದಂತೆ ಅದನ್ನು ಕೈವಶಪಡಿಸಿ ಕೊಂಡರೆ ಬಹಳ ಚೆನ್ನಾಯಿತು; ಅದಾಗದಿದ್ದರೆ ಅವಳನ್ನು ಮದುವೆಯಾಗಬೇಕು. ಹೇಗಿದ್ದರೂ ಲಾಭವು ಸಿದ್ಧ.

ಇಂತಹ ಸವಿ ಕಲ್ಪನೆಯ ರೆಕ್ಕೆಗಳ ಮೇಲೆ ವಿಹರಿಸು

ತ್ತಿದ್ದ ವೀರಪ್ಪನಿಗೆ ಅರ್ಧಕ್ಷಣದ ಕಾಲಹರಣವು ಸಹ ಮೂರ್ಖತನವೆನಿಸಿತು. ಅವನು ಮೇಲಕ್ಕೆದ್ದು ಕಾಲುಗಳನ್ನೆಳೆದು ನಡೆಯತೊಡಗಿದನು. ಆ ಕೋಟೆಯಂತಹ ಮನೆಯನ್ನು ಪುನಃ ಕಂಡುಕೊಳ್ಳುವುದು ಸುಲಭಸಾಧ್ಯವಲ್ಲವೆಂದೂ, ಪ್ರತಾಪರುದ್ರನ ಅಸುಯಾಯಿಗಳು ತನ್ನನ್ನು ನೋಡಿಬಿಡುವ ಸಂಭವವಿದೆಯೆಂದೂ, ವೀರಪ್ಪನು ಕ್ಷಣಕಾಲ ಚಿಂತಿಸಿದನು. ಆದರೂ ಅವನ ಭವ್ಯಭವಿಷ್ಯತ್ಸ್ಥಿತಿಯ ಕಲ್ಪನೆಯ ಮುಂದೆ ನಿಕೃಷ್ಟವರ್ತಮಾನಕಾಲವು ತುಚ್ಛವೆನಿಸಲು, ಬಹಳ ಹುರಿದುಂಬಿ ಹೊರಟುಬಿಟ್ಟನು. ಆಗ ಸಾಯಂಕಾಲದ ಆರು ಗಂಟೆಯಾಗಿತ್ತು.

ಅಂತೂ ಇಂತೂ ತಾನು ಗುರುತಿಟ್ಟುಕೊಂಡು ಬಂದ ಪ್ರತಿ ಗಿಡ, ಅಂಗಡಿ, ಗುಡಿ, ಮನೆ ಮೊದಲಾದುವುಗಳನ್ನು ಹುಡುಕುತ್ತಾ ನಿರ್ದಿಷ್ಟಸ್ಥಾನವನ್ನು ಸೇರಿದನು. ಪ್ರತಾಪರುದ್ರನೇ ಮೊದಲಾದವರು ಒಂದು ವೇಳೆ ಗಂಟುಬಿದ್ದರೂ, ಸುತ್ತಲಿನ ನಿವಾಸಿಗಳೆಲ್ಲರೂ ಕಳ್ಳಕಾಕರಾಗಿರುವ ಸಂಭವವಿಲ್ಲವಾದುದರಿಂದ ತನಗೆ ಸಹಾಯವು ಸಿಕ್ಕೇ ಸಿಗುವುದೆಂದು ನಂಬಿದನು. ಮುಚ್ಚಿಟ್ಟುಕೊಂಡಿದ್ದ ಆಯುಧಗಳನ್ನು ಅವನು ಮತ್ತೊಮ್ಮೆ ಮುಟ್ಟಿ ನೋಡಿಕೊಂಡನು.

ಅವನು ಬಾಗಿಲನ್ನೇನೋ ದೂಡಿದನು. ಒಂದು ವೇಳೆ ಒಳಗಿನಿಂದಾರೂ ಬರದಿದ್ದರೆ ಮುಂದೇನು ಮಾಡಬೇಕೆಂಬುದು ಅವನಿಗೀಗ ತಿಳಿಯದಾಯಿತು. ಅಷ್ಟರಲ್ಲಿ ನವತರುಣಿಯೊಬ್ಬಳು ಬಾಗಿಲನ್ನು ಅರ್ಧ ತೆರೆದಳು. ಅವಳ ಕೈಯಲ್ಲೊಂದು ದೀಪವಿತ್ತು. ಧರಿಸಿದ ಬಟ್ಟೆಗಳು ಬಡವರಿಗೆ ತಕ್ಕಂತಿದ್ದುವು. ಸಾಧಾರಣ ಸುಂದರಿಯಾದ ಅವಳ ಗಲ್ಲ

ಗಳೇಕೋ ಕಾಂತಿಹೀನವಾಗಿದ್ದುವು. ಅವಳು ನಗುವ ಪೂರ್ವದಲ್ಲಿಯೇ ಅಲ್ಲಿ ಪಚ್ಚು ಬೀಳುತ್ತಿತ್ತು.

ಅವಳು ಕಠಿಣ ಮಾತಿನಿಂದ "ನೀನಾರು?" ಎಂದ ಗರ್ಜಿಸಿದಳು.

"ಇಗೋ, ನೀನು ಸುಂದರಿಯೆನ್ನುವವಳಾಗಿದ್ದರೆ ತಡವಿಲ್ಲದೆ ಆದಷ್ಟು ಜಾಗ್ರತೆಯಾಗಿ ಗುಪ್ತರೀತಿಯಲ್ಲಿ ನಾನೆರಡು ಮಾತುಗಳನ್ನು ಹೇಳಬೇಕಾಗಿದೆ."

"ನಾನು ಪುನಃ ಆಜ್ಞಾಪಿಸುತ್ತೇನೆ, ಉತ್ತರಕೊಡು. ನೀನಾರು? ನನಗೇನೂ ತಿಳಿಯದು-ಶತ್ರುವೋ ಮಿತ್ರನೋ?"

"ನಿನ್ನೆಯ ರಾತ್ರಿ ನಿಮ್ಮ ತಂದೆಯ ಅವಸಾನ ಕಾಲದಲ್ಲಿ ನಾನಿಲ್ಲಿದ್ದೆನು."

"ಹಾಗಾದರೆ, ನೀವು ಒಳಗೆ ಬರಬಹುದು."

ಅವನು ಒಳಗೆ ಬಂದೊಡನೆಯೇ ಬಾಗಿಲು ಮುಚ್ಚಲ್ಪಟ್ಟಿತು.

ಅವರಿಬ್ಬರೂ ಪಡಸಾಲೆಯಲ್ಲೊಂದು ಚಾಪೆಯ ಮೇಲೆ ಕುಳಿತುಕೊಂಡರು. "ಸ್ವಾಮಿ, ಕ್ಷಮಿಸಿರಿ. ಮಹಡಿಯ ಮೇಲಿನ ಕೂಡುವ ಕೋಣೆಗೆ ಇಂದು ಯಾರನ್ನೂ ಕರೆದೊಯ್ಯುವಂತಿಲ್ಲ. ಶವವಿನ್ನೂ ಅಲ್ಲಿದೆ; ಅದನ್ನು ನೋಡುವುದು ನನ್ನಿಂದಾಗದು."

"ಹೇಗೆಯೋ? ನಾನು ಆಕಸ್ಮಿಕವಾಗಿ ನಿನ್ನೆಯ ರಾತ್ರಿ ಇಲ್ಲಿಗೆ ಬಂದೆನು. ಅಟ್ಟದ ಮೇಲೆ ನೆರಳುವುದು ಕೆಳಗೆ ಕೇಳಿಬರಲು ಏನಾದರೂ ಸಹಾಯ ಮಾಡಬಹುದೆಂದು ನಾನಲ್ಲಿಗೆ ನಡೆದೆನು. ಓ, ನೀನು ಕಣ್ಣೀರಿಡಬೇಡ."

"ನಮ್ಮ ತಂದೆಯು ಆಗ ಮರಣಯಾತನೆಯಲ್ಲಿ

ದ್ದನೇ ? ಹಾಗಾಗುವುದೆಂಬುದು ನನಗೆ ಗೊತ್ತಿರಲಿಲ್ಲ; ಗೊತ್ತಿದ್ದರೆ ಅವನೊಬ್ಬನನ್ನೇ ಬಿಟ್ಟು ಹೋಗುತ್ತಿದ್ದೆನೇ? ಆ ದಿನ ಸಾಯಂಕಾಲ ನಾನು ಹೊರಗೆ ಹೋಗುವಾಗ ಅವ ನೆದ್ದು ಕುಳಿತಿದ್ದನು. ಓಡಾಡುವಷ್ಟು ಶಕ್ತಿಯೂ ಅವನಿ ಗಿತ್ತು. ನಾನು ಹೊರಗೆ ಹೋದನಂತರ ಅವನೇ ಒಳಗಿನಿಂದ ಚಿಲಕವನ್ನು ಹಾಕಿಕೊಂಡನು. "

"ನನಗೀಗ ನೆನಪಾಯಿತು!! ನಾನೊಳಗೆ ಬಂದಾಗ ಚಿಲಕವು ಒಳಗಿನಿಂದ ಹಾಕಲ್ಪಟ್ಟಿತ್ತು. ನೀನು ಹೇಗೆ ಒಳಗೆ ಬಂದೆ ?"

"ನಾನೇ ನಿಮ್ಮನ್ನು ಕೇಳುತ್ತೇನೆ. ನೀವೆಂತು ಒಳಗೆ ಬಂದಿರಿ ?"

"ಸುಂದರೀ, ಸಂಶಯಿತಳಾಗಬೇಡ. ನಾನೆಲ್ಲವನ್ನೂ ಹೇಳುವೆನು. ನಾನು ಹಿಂದಿನ ಬಾಗಿಲನ್ನು ತೆರೆದು ಒಳ ಹೊಕ್ಕೆನು. "

"ಓಹೋ, ಮಗ್ಗುಲ ನೆಲವನೆಯಿಂದ ಓಡಿಹೋದ ಸದ್ಗೃಹಸ್ಥರಲ್ಲಿ ನೀವೂ ಒಬ್ಬರೋ ? ನೀವು ಬೆದರ ಬೇಡಿರಿ; ನಾನು ನಿಮ್ಮನ್ನು ಕೈಬಿಡುವುದಿಲ್ಲ ಬಾಗಿಲನ್ನು ತೆರೆಯಲು ಇಲ್ಲಾರೂ ಸಜೀವಿಗಳಿಲ್ಲದಿರುವಾಗ ನಾನೆಂತು ಒಳಗೆ ಬಂದೆನೆಂದು ಕೇಳಿದಿರಲ್ಲವೇ ? ನಾನು ಮರುದಿನ ಮಧ್ಯಾಹ್ನದ ಮೊದಲು ಇಲ್ಲಿಗೆ ಬಂದೊಡನೆಯೇ ಮಹಾ ರುದ್ರನು ನನ್ನನ್ನು ಬರಮಾಡಿಕೊಂಡು ಬಂದಿಗಳಿಬ್ಬರು ತಮ್ಮ ಲ್ಲಿಂದ ತಪ್ಪಿಸಿಕೊಂಡಿರುವರೆಂದೂ ಅವರು ನಮ್ಮ ಮನೆಯ ಮುಖಾಂತರವಾಗಿ ಹೊರಬಿದ್ದಿರುವರೆಂದೂ ಎಡಬಲದಲ್ಲಿ ಯಾರಲ್ಲಿಯೂ ಈ ವಿಷಯವನ್ನು ಹೇಳದಿರಬೇಕೆಂದೂ ತಿಳಿ

ಸಿದನು. ಇವಾವುವೂ ನನಗೆ ಸಂಬಂಧಿಸಿದ ಕಾರ್ಯವಲ್ಲ ವೆಂದೂ ನಾನು ಇದರಲ್ಲಿ ಕೈಹಾಕುವುದಿಲ್ಲವೆಂದೂ ವಚನ ಕೊಟ್ಟೆನು. ನೀವು ಮಾಡಿದ ಕಿಂಡಿಯಲ್ಲಿ ನುಸುಳಿ ನಾನಿ ಲ್ಲಿಗೆ ಬಂದೆನು. ತನ್ನ ಕೋಣೆಗೆ ಪತ್ರಬರೆಯಲು ೞ ದವನ ಕಾರ್ಯವಿದೆಂದು ಮಹಾರುದ್ರನು ಶಂಕಿಸಿದನು. ನಾನು ಬಂದಾಗ ತಂದೆಯವರು ಮೃತರಾಗಿದ್ದರು. ಮುಂದಿನ ಬಾಗಿಲಿನ ಕೀಲಿಯೂ ಚಿಲಕವೂ ಹೇಗೆ ತೆರೆಯಲ್ಪ ಟ್ಟುವೆಂದು ನೀವು ಮಾತನಾಡುವ ವರೆಗೂ ನಾನು ವಿಚಾರ ದಲ್ಲಿದ್ದೆನು. "

" ಸುಂದರೀ, ನಿಮ್ಮಪ್ಪನು ಧನವಂತನಲ್ಲವೇ? "

ಅವಳೊಮ್ಮೆ ಅಪಹಾಸ್ಯದಿಂದ ನಕ್ಕು " ಅಹಾ, ಎಂತಹ ಧನವಂತ!" ಎಂದಳು. "ನನ್ನ ಸಂಶಯಗಳು ಸತ್ಯವಾಗ ತೊಡಗಿವೆ. ಅವನು ಜಿಪುಣ, ಇದು ನಿನಗೆ ಗೊತ್ತಿರಲಿ ಕ್ಕಿಲ್ಲ, ಅವನೆಲ್ಲ ದ್ರವ್ಯವನ್ನೂ ಎಲ್ಲಿಡುತ್ತಿದ್ದನು? "

" ನಾನರಿಯೆ ! ಆದರೂ ಬಹು ದ್ರವ್ಯವಿದ್ದರೂ ಇರ ಬಹುದು. "

" ಅಹುದು, ಅಹುದು, ಸುಂದರೀ ನೀನೆನ್ನುವುದು ಸರಿ. ನಿನಗಿದು ಸಿಕ್ಕುವಂತೆ ಮಾಡಿದರೆ ನನಗಾವ ಸಂಭಾವನೆ ಯನ್ನು ಕೊಡುವೆ ? "

" ನಾನೇನು ಕೊಡಲಿ? ನನ್ನಲ್ಲಿರುವುದರಲ್ಲಿ ನಿಮಗೆ ಬೇಕಾದುದೇನು ? "

"ಹಣವನ್ನು ಸರಿಯಾಗಿ ಹಂಚಿಕೊಳ್ಳುವುದು ಸರಿಯಲ್ಲ. ಇರುವ ಸಂಪತ್ತಿನಲ್ಲೆರಡು ಭಾಗಗಳಾದರೆ ಯಾರೊಬ್ಬರೂ ಹೇಳಿಕೊಳ್ಳುವಂತಹ ಹಣಗಾರರಾಗಲಾರರು. "

"ಇದರ ಅರ್ಥವೇನು? ನೀವೆನ್ನುವುದಾದರೂ ಏನು?"

"ನನ್ನ ಅರ್ಥವೇನೆಂದರೆ— ನಾನೆನ್ನುವುದೇನೆಂದರೆ— ನಾನು ಕಲ್ಪಿಸಿರುವುದೇನೆಂದರೆ— ನನಗೆ ಭರವಸೆಯಿರುವುದೇನೆಂದರೆ—ಸುಂದರಿ, ನೀನು ಅವಿವಾಹಿತಳಲ್ಲವೇ?"

"ಏಕೆ? ನಾನಹುದು, ಮುಂದೆ?"

"ಈಗೇನೂ ವಿಶೇಷವಿಲ್ಲ— ವಿವಾಹದ ವಿಷಯವು ಈಗ ಬೇಡ. ನಮ್ಮ ಮಾತಿನ ಮುಖ್ಯಭಾಗದ ಕಡೆಗೆ ನಾವೀಗ ತಿರುಗಿ ನೋಡಬೇಕು. ಇದು ನಿಮ್ಮಪ್ಪನ ಹಸ್ತಾಕ್ಷರವೋ?"

ಅವಳದನ್ನು ತೆಗೆದುಕೊಂಡಳು. ನಿಸ್ತೇಜವಾಗಿದ್ದ ಕಣ್ಣು ಕದಪುಗಳಲ್ಲಿ ಒಮ್ಮಿಂದೊಮ್ಮೆ ಸೌಂದರ್ಯವುಕ್ಕಿ ಬಂದಿತು.

"ಅಹುದು; ಇದು ಅವನಕ್ಷರವೇ ಅಹುದು; ನಮ್ಮ ಮುಂದಿನ ಜೀವನವು ಆನಂದಮಯವಾಗುವುದರಲ್ಲಿ ಅನುಮಾನವಿಲ್ಲ."

ವೀರಪ್ಪನು ಮನದೆಣಿಕೆಗಳು ಕೈಗೂಡುವವೆಂದರಿತು ನಲಿದಾಡಿದನು.

"ನನಗೂ ಹಾಗೆಯೇ ಅನಿಸಿತ್ತು. ಬಾ, ನಾವಿಬ್ಬರೂ ಅಲ್ಲಿ ಹುಡುಕಿ ನೋಡೋಣ, ನಂತರ ನೀನು ಅವಿವಾಹಿತಳೇ ಹೇಗೆಂದು ಕೇಳಿದುದರ ಕಾರಣವನ್ನೊರೆಯುವೆನು."

ತರುಣಿಯು ಅರ್ಥಗರ್ಭಿತವಾದ ಮುಗುಳ್ನಗೆಯನ್ನು ಬೀರಿದಳು. ಅಪರಿಚಿತನ ಭಾವವನ್ನು ಅವಳರಿತಿರುವಂತೆಯೂ ಹೆಚ್ಚಿನ ವಿವರವು ಬೇಡೆಂಬಂತೆಯೂ ತೋರಿತು. ವೀರಪ್ಪನು ಈ ಮೊದಲು ತಾನವಳ ಸೌಂದರ್ಯವನ್ನು ಪೂರ್ಣವಾಗಿ ಅರಿತಿರಲಿಲ್ಲವೆಂದುಕೊಂಡನು.

ವೀರಪ್ಪನು ಪುನಃ ರಾತ್ರಿಯಲ್ಲಿಯೇ ಹಿಂದೆ ನೋಡಿದ

ಸ್ಥಾನಗಳನ್ನು ನೋಡಿದನು. ಮಗ್ಗುಲ ನೆಲವನೆಯೊಳಕ್ಕೆ ಯಾರಾದರೂ ಎಳೆದೊಯ್ದರೆ ಹೇಗೆಂಬ ವಿಚಾರವು ಬರಲು ಅವನ ಮೈಯಲ್ಲಿ ಚಳಿಬಂದಂತಾಗುತ್ತಿತ್ತು.

"ಅಗೋ, ಕಲ್ಲು ಅಲ್ಲಿದೆ" ಎಂದು ಸುಂದರಿಯು ಮೃದು ಮಧುರವಾಗಿ ನುಡಿಯಲು ಇವನಿಗೆ ಎಚ್ಚರವಾದಂತಾಯಿತು.

ದೂರಿನ ಮೂಲೆಯಲ್ಲೊಂದು ಹಾರೆಯಿತ್ತು. ತನ್ನ ತಂದೆಯು ಅದನ್ನೇಕೆ ಜತನವಾಗಿಡುತ್ತಿದ್ದನೆಂಬುದು ಸುಂದರಿಗೀಗ ಹೊಳೆಯಿತು. ಅವಳದನ್ನು ತರಲೆಂದು ಅತ್ತ ಹೋಗಲು ವೀರಪ್ಪನು ಅವಳ ಮನೋಭಾವವೇಂತಿರುವುದೋ ಎಂದು ಚಿಂತಿಸಿ, ಅವಳೊಂದು ವೇಳೆ ಹೊರಗಿನಿಂದ ಬಾಗಿಲನ್ನಿಕ್ಕಿಕೊಂಡು ಹೋಗದಂತೆ, ಬಾಗಿಲ ಬಳಿಯಲ್ಲಿ ಬಂದು ನಿಂತನು. ಇದನ್ನು ಆ ಚದುರೆಯು ಅರಿಯದಿರಲಿಲ್ಲ. ಅವಳಾಗ ತನ್ನನ್ನೆ ನಟ್ಟ ದಿಟ್ಟಿಯಿಂದ ನೋಡುವ ವೀರಪ್ಪನಿಗೆ— "ದೂರಾಲೋಚನೆಯುಳ್ಳ ನೀನು ನನ್ನಲ್ಲಿ ಸಂದೇಹಪಡುವುದು ಅನುಚಿತವಲ್ಲ. ಆದರೆ ನಾನು ಆ ಮಹಾರುದ್ರನನ್ನು ಎಷ್ಟು ದ್ವೇಷಿಸುವೆನೆಂಬುದು ನಿನಗೇನು ಗೊತ್ತು!! ಇದಲ್ಲದೆ ನೀನು ನನಗೆ ಲಾಭದಾಯಕವಾದ ಕಾರ್ಯದಲ್ಲಿ ಕೈಹಾಕಿಲ್ಲವೇ ? ಎಂದ ಮೇಲೆ ನಾನು ನಿನ್ನನ್ನು ಗಂಡಾಂತರಕ್ಕೀಡು ಮಾಡುವೆನೇ ?" ಎಂದಳು.

"ನೀನೀ ರೀತಿಯಲ್ಲಿ ಮಾತನಾಡಲು ಆರಂಭಿಸಿದುದನ್ನರಿತು ನನಗಾನಂದವಾಯಿತು. ಇದರಿಂದ ನಾನು ಹೆಚ್ಚು ಸಂತೋಷದಿಂದ ನಿನ್ನ ಕಾರ್ಯಗಳಲ್ಲಿ ಸಹಕರಿಸುವೆನು. ಸುಂದರೀ, ನೀನು ಬಹು ಒಳ್ಳೆಯವಳು."

ವಿವಾಹವನ್ನು ಅವಳು ಅಸಮ್ಮತಿಸಳೆಂದು ಈಗ ಅವನಿಗೆ

ತೋರಿತು. ಹಾರೆಯನ್ನು ತೆಗೆದುಕೊಂಡು ನೆಲವನ್ನಗೆದು ಆ ಕಲ್ಲನ್ನು ಆತ್ತ ಸರಿಸಿದನು. ಕೆಳಗೆ ಪೊಳ್ಳಾದ ಪ್ರದೇಶವಿತ್ತು. ಅಲ್ಲಿ ಆರು ಚಿಕ್ಕ ಚಿಕ್ಕ ಚೀಲಗಳು ಕಂಡುಬಂದುವು. ಅವುಗಳಲ್ಲಿ ಒಂದೊಂದು ಸಾವಿರಕ್ಕೆ ಕಡಿಮೆಯಿಲ್ಲದಷ್ಟು ನಾಣ್ಯಗಳಿವೆಯೆಂದು ಇಬ್ಬರೂ ಅಂದಾಜುಕಟ್ಟಿದರು. ಕೆಳಗಿನ ಕೋಣೆಯಲ್ಲಿ ಅದನ್ನು ಬಿಚ್ಚಿ ನೋಡಬೇಕೆಂದು ಇಬ್ಬರೂ ಕೆಳಗಿಳಿದರು.

"ಅನ್ವರ್ಥಕನಾಮವುಳ್ಳ ಸುಂದರೀ, ಈಗ ನಮ್ಮ ಭವಿಷ್ಯವನ್ನು ನಿರ್ಣಯಿಸೋಣ. ನಾನು ವ್ಯವಹಾರದಲ್ಲಿ ಅನುಭವವುಳ್ಳ ಸದ್ಗುಣಿಯಾದ ಸದ್ಗೃಹಸ್ಥನು. ವೀರಪ್ಪನೆಂಬ ಹೆಸರಿಗೊಪ್ಪುವಂತೆ ಸಾಹಸಜೀವಿಯು. ಇನ್ನೂ ಅವಿವಾಹಿತನು. ಯೋಗ್ಯ ಪತ್ನಿಗಾಗಿ ಕನವರಿಸುವವನು. ನೀನೇನು ಹೇಳುವೆ? ನನ್ನನ್ನು ವರಿಸಿ ಸುಖವಾಗಿರಲೊಪ್ಪುವೆಯೋ? ಎಂದರೆ ನಮ್ಮ ವ್ಯಾಪಾರವು ಸಮಾಪ್ತಿಯಾಯಿತು; ಹಣವನ್ನು ಹಂಚುವುದು ಬೇಡ."

"ದ್ರವ್ಯಕ್ಕೆ ಮಹತ್ವವನ್ನೀಯದೆ ನೀವು ನನಗೇ ಮಹತ್ವವನ್ನು ಕೊಟ್ಟರೆ ಏನೂ ಅಡ್ಡಿಯಿಲ್ಲ. ನಿಮ್ಮ ಬಡತನದ ಸ್ಥಿತಿಯಲ್ಲಿಯೇ ನಿಮ್ಮನ್ನು ಲಗ್ನವಾಗೆಂದರೂ ನಾನು ಒಲ್ಲೆನ್ನುವುದಿಲ್ಲ. ನಾವಿಬ್ಬರೂ ಮೊದಲು ಇಲ್ಲಿಂದ ಹೊರಡಬೇಕು—ನನ್ನ ಅಭಿಪ್ರಾಯವು ನಾವು ಬೇರ್ಪಡುವ ಮುಂಚೆ—"

"ಗಾಂಧರ್ವವಿಧಿಯಲ್ಲಿ ವಿವಾಹವಾಗಬೇಕೆನ್ನುವೆಯೋ?"

ಆವಳು ತಲೆಹಾಕಿದಳು. ಅರಕ್ಷಣ ಇಬ್ಬರ ತುಟಿಗಳೂ

ಒಂದುಗೂಡಿದುವು. ವೀರಪ್ಪನು ತಮ್ಮ ಮೊದಲ ಕಾರ್ಯವು ಶವಸಂಸ್ಕಾರವನ್ನು ಮಾಡುವುದೆನ್ನಲು ಸುಂದರಿಯು ಅದಕ್ಕೆ ತಕ್ಕ ವ್ಯವಸ್ಥೆಯನ್ನು ಮಾಡಿರುವುದಾಗಿಯೂ ಅಂದಿನಿಂದ ಮೂರನೆಯ ದಿನ ಅತಿ ಗುಪ್ತ ರೀತಿಯಲ್ಲಿ ಅದು ನಡೆಯುವುದೆಂದೂ ಹೇಳಿದಳು.

ಸುಂದರಿಯು ಅಪರಿಚಿತನಾದ ವೀರಪ್ಪನು ಚಿರಪರಿಚಿತನೆಂಬಂತೆ ತೋರುತ್ತಿರುವುದರಿಂದ ಹೇಗಾದರೂ ಆ ಕ್ರೂರ ಸನ್ನಿವೇಶದಿಂದ ಅವನೊಡನೆ ಹೊರಹೊರಡಬೇಕೆಂದಳು. ಆಗವನು ತನ್ನ ಸೊಂಟದ ಸುತ್ತಲೂ ನಾಲ್ಕು ಚೀಲಗಳನ್ನು ಕಟ್ಟಿಕೊಂಡು ಅವಳಿಗೂ ಇನ್ನೆರಡನ್ನು ಕಟ್ಟಿಕೊಳ್ಳಬೇಕೆಂದು ಹೇಳಿದನು.

ಸುಂದರಿಯು ಮತ್ತೊಮ್ಮೆ ಮಹಡಿಯನ್ನೇರಿ ತನ್ನ ಬಟ್ಟೆಬರೆಗಳನ್ನೂ ಒಂದು ಕಾಗದದ ಸುರುಳಿಯನ್ನೂ ತೆಗೆದುಕೊಂಡು ಕೆಳಗಿಳಿದು ಬಂದಳು.

ತಾನು ಇಂದ್ರಭವನಕ್ಕೆ ಹೋಗಬೇಕೆನ್ನಲು ಆ ಭಾಗದಲ್ಲಿಯ ಸಂದುಗೊಂದುಗಳನ್ನು ಬಲ್ಲ ಸುಂದರಿಯು ಅವನನ್ನು ಅಲ್ಲಿಗೆ ನಿರಾಯಾಸವಾಗಿ ಕರೆದೊಯ್ದಳು.

---

## ಶಶಿಕಲೆ

ಎರಡು ವರ್ಷಗಳಿಂದಲೂ ನೆಮ್ಮದಿಯಾಗಿದ್ದ ಶಶಿಕಲೆಗೆ ಪಾರ್ವತಿಯ ಮಹಲು ಮನೆಯೆಂಬ ಭಾವನೆಯಾಗಿತ್ತು. ಈ ದಿನ ನಿರ್ವಾಹವಿಲ್ಲದೆ ಪಾರ್ವತಿಯೊಡನೆ ಹೊರಬೀಳುವ

ಸಂಧಿಯಲ್ಲಿ ಅವಳಿಗೆ ಬಹು ಕಳವಳವಾಯಿತು. ಶಶಿಕಲೆಯ ವಯಸ್ಸು ೧೬-೧೭.

"ಶಶಿ, ಶೋಕಿಸಬೇಡ. ಲೀಲಾವತಿಯು ಬಹು ಒಳ್ಳೆಯವಳು. ನಿನ್ನ ಮಿತ್ರಳಾದ ನಾನೂ ಮೇಲಿಂದ ಮೇಲೆ ಬಂದುಹೋಗುವೆನು. ನೀನು ಪ್ರೇಮಪಾಶದಲ್ಲಿ—"

"ಬಾಯಿ, ಅವನ ವಿಚಾರವನ್ನೆತ್ತಬೇಡ. ಏಕೆಂದರೆ ನನಗೆ ಹುಚ್ಚು ಹಿಡಿಯುವುದು. ನಾನವನನ್ನು ಪ್ರೀತಿಸುವೆನೋ ಅಥವಾ ದ್ವೇಷಿಸುವೆನೋ, ಅವನನ್ನು ಚುಂಬಿಸುವೆನೋ ಅಥವಾ ಚೂರಿಯಿಂದಿರಿಯುವೆನೋ—ನನಗೇನೂ ಗೊತ್ತಿಲ್ಲ."

"ಪ್ರಿಯೆ, ನೀನವನನ್ನು ಮರೆಯಲು ಯತ್ನಿಸತಕ್ಕದು."

"ಅದು ಸಾಧ್ಯವಿಲ್ಲವೇ ಇಲ್ಲ."

"ಅಸಾಧ್ಯವೇ? ಶಶಿ, ಅದೇಕೆ?"

"ನಾನವನ ಪ್ರತಿಮೆಯನ್ನು ಪೂಜಿಸುವುದಕ್ಕಾಗಲಿ ಇಲ್ಲವೇ ಸೇಡು ತೀರಿಸಿಕೊಳ್ಳುವುದಕ್ಕಾಗಲಿ ಹೃದಯದಲ್ಲಿ ನಿಲಿಸಿರಲಿಕ್ಕೇಬೇಕು."

"ನೀನು ನನ್ನನ್ನು ಈದಿನ ದಿಗ್ಭ್ರಮೆಗೊಳಿಸುತ್ತಿರುವೆ!! ಚೆಲುವೇ, ಏನಾದರೂ ಮಾಡಿ ಶಾಂತಳಾಗು; ಇನ್ನು ಅಂತಹ ವಿಚಾರದಿಂದ ಬಳಲಬೇಡ."

"ಇದರಿಂದ ನಿನಗೆ ತಾಪವಾಗಿದ್ದರೆ, ಪಾರ್ವತೀ, ನನ್ನನ್ನು ಕ್ಷಮಿಸು. ಇನ್ನು ಮಾತು ಬೇಡ."

ಶಶಿಕಲೆಯು ಕಣ್ಣೀರಿಟ್ಟಳು. ಈ ಸಲ ಪಾರ್ವತಿಯು ಅವಳನ್ನು ಸಂತೈಸಲಿಲ್ಲ. ಏಕೆಂದರೆ ಅತ್ಯಂತ ದುಃಖವು ಕಣ್ಣೀರಿನ ಮೂಲಕವಾಗಿ ಕರಗಿದಲ್ಲದೆ ಶಾಂತತೆಯು ಉದಿಸ

ದೆಂಬುದು ಅವಳಿಗೆ ಗೊತ್ತಿತ್ತು.

ಇಷ್ಟರಲ್ಲಿ ಇವರ ಕುದುರೆಯ ಗಾಡಿಯು ಒಂದು ಮನೆಯ ಮುಂದೆ ಬಂದು ನಿಂತಿತು. ಪಾರ್ವತಿಯು ಶಶಿಕಲೆಯೊಡನೆ ಮಂದಿರವನ್ನು ಪ್ರವೇಶಿಸಿದಳು. ಲೀಲಾವತಿಯು ಪ್ರಥಮ ದರ್ಶನಮಾತ್ರದಲ್ಲಿಯೇ ಶಶಿಕಲೆಯನ್ನು ಪ್ರೀತಿಸಲಾರಂಭಿಸಿದಳು.

ಲೀಲಾವತಿ—"ಪಾರ್ವತೀಬಾಯಿ, ಇವಳು ಬಹು ಚೆಲುವ ಹುಡುಗಿಯು."

ಪಾರ್ವತಿ —"ಶಶಿಕಲೆಯು ಬರಿಯ ಚೆಲುವೆಯಲ್ಲ, ಅತ್ಯಂತ ಸದ್ಗುಣಿಯೂ ಅಹುದು. ನಾನವಳಿಗೆ ನನಗಿಂತಲೂ ಹೆಚ್ಚು ಉತ್ತಮ ರೀತಿಯಿಂದ ಇನ್ನೆರಡುಮೂರು ತಿಂಗಳವರೆಗೂ ನೀವಿಟ್ಟುಕೊಂಡಿರುವಿರೆಂದು ಭರವಸೆಯನ್ನು ಕೊಟ್ಟಿದ್ದೇನೆ."

ಲೀಲಾವತಿ—"ಹುಶ್. ಬಾಯೀ, ಹುಶ್. ಮೆಲ್ಲಗೆ ಮಾತನಾಡಿರಿ, ಇಲ್ಲಿಯ ಗೋಡೆಗಳಿಗೆ ಕಿವಿಯಿರುವುದೆಂಬುದನ್ನು ಮರೆಯಬೇಡಿರಿ."

ಪಾರ್ವತಿ —"ಲೀಲಾವತೀ ಕ್ಷಮಿಸು, ನನಗೇಕೋ ಮರವು ಬಂತು. ಶಶಿಕಲೆಯು ನಂಬಿಗಸ್ಥಳು, ಸದ್ಗುಣೆಯು, ನಾಜೂಕು. ನೀನವಳಲ್ಲಿ ನಂಬಿಗೆಯನ್ನಿಡಬಹುದು."

ಲೀಲಾವತಿ—"ಹಾಗಾದರೆ ಅಡ್ಡಿಯಿಲ್ಲ. ನಾನೆಂಥವಳೆಂಬುದನ್ನು ಅವಳ ಇಲ್ಲಿಯ ಸಂಗಡಿಗರೇ ಹೇಳಿಬಿಡುವರು. ಇದಲ್ಲದೆ—"

ಪಾರ್ವತಿ —“ಓಹೋ! ನಿಮ್ಮ ವರ್ಣನೆಯನ್ನು ನಾನು ಮಾಡತಕ್ಕದ್ದೋ ಅಥವಾ ನೀವೇ ಮಾಡಿಕೊಳ್ಳಬೇಕೋ!!”

ಲೀಲಾವತಿ—“ಹುಶ್, ಇದೇನು? ಇಷ್ಟು ಗಟ್ಟಿಯಾಗಿ ಹೇಳಬೇಡಿರಿ. ಇಲ್ಲಿಯ ಗೋಡೆಗಳಿಗೆ ಕಿವಿಯಿಲ್ಲವೋ?”

ಪಾರ್ವತಿ —“ಅಯ್ಯೋ, ಮರೆತೆ.”

ಲೀಲಾವತಿ—“ಶಶಿ, ನಿಮ್ಮ ಪಾರ್ವತಿಯು ಹೇಳಿರುವಂತೆ ನೀನು ಇಲ್ಲಿಂದ ಹೊರಹೊರಡಲು ತಕ್ಕವಳಾಗುವವರೆಗೆ—೨-೩ ತಿಂಗಳ ತನಕ—ಇದು ನಿನ್ನ ಮನೆ. ಇದಕ್ಕೇನೂ ಸಂಶಯಪಡಬೇಡ, ನೀನು ಗಾಬರಿಯಾಗಬೇಡ.”

ಪಾರ್ವತಿ —“ಶಶಿ, ಅದು ಸರಿ. ಈಗ ಇದು ಹೊಸ ಸ್ಥಳವಾದರೂ ಮುಂದೆ ಪರಿಚಿತ ಸ್ಥಳವಾಗುವುದು. ನಾನು ಮುಂದಿನ ರವಿವಾರ ಬರುವೆನು, ಈಗ ವ್ಯವಧಾನವಿಲ್ಲ. ಅಷ್ಟು ಹೊತ್ತಿಗೆ ನೀನು ನಿಶ್ಚಿಂತಳಾಗಿರುವೆ, ಜೋಕೆ.”

ಲೀಲಾವತಿ—“ಅಯ್ಯೋ, ಪಾರ್ವತೀ, ಮೆಲ್ಲಗೆ. ನಾನಾಗ ಏನು ಹೇಳಿದೆ?”

ಪಾರ್ವತಿ —“ಇನ್ನು ಬೇಕಾದರೆ ನೋಡು, ಬಹು ಮೆಲ್ಲಗೆ ನುಡಿಯುತ್ತೇನೆ. ಇಲ್ಲಿ ಈಗೆಷ್ಟು ಜನಗಳಿದ್ದಾರೆ? ಅವರೆಲ್ಲರೂ ಇವಳ ಸ್ನೇಹಕ್ಕೆ ತಕ್ಕವರಷ್ಟೇ?”

ಲೀಲಾವತಿ—“ಈಗಿರುವವರು ೪-೫ ಮಹಿಳೆಯರು. ಒಬ್ಬ

ಳನ್ನುಳಿದು ಇನ್ನೆಲ್ಲರೂ ಯೋಗ್ಯರು. ಶ್, ಅದೇನು ಶಬ್ದ?"

ಪಾರ್ವತಿ—"ಅದು ನಮ್ಮ ಕುದುರೆಯ ಬಂಡಿಯದು. ಒಬ್ಬ ರಮಣಿಯೆಂದೆಯಲ್ಲ—ಅವಳಾರು?

ಲೀಲಾವತಿ—"ಮೆಲ್ಲಗೆ, ಗೋಡೆಗಳಿಗೆ ಕಿವಿಯಿದೆ. ಇಲ್ಲೊಬ್ಬ ಅಪ್ಸರೆಯಿದ್ದಾಳೆ. ಗೌಪ್ಯವು ಅವಳ ವಿಷಯದಲ್ಲಿ ಹೆಚ್ಚು ಅಗತ್ಯವಾಗಿದೆ. ಬಹು ದೊಡ್ಡ ಮನೆತನದವಳು—ಹುಶ್, ಅದಾವ ಸಪ್ಪಳ? ಪುನಃ, ಆ ಕುದುರೆ! ಅವಳು ತನ್ನ ಕೋಣೆಯನ್ನು ಬಿಟ್ಟು ಹೊರಕ್ಕೆ ಬರುವುದಿಲ್ಲ. ಅದೊಂದು ಶೋಚನೀಯ ಕಥೆ. ಶಶಿಕಲೆಗೆ ಇತರ ಮಿತ್ರರಿರುವರು. ಚಿಂತೆಯೇಕೆ?"

ಪಾರ್ವತಿ—"ಅದೇನೂ ಇಲ್ಲ—ನೀವಿರುವಾಗ, ನಾನು ನಿಲ್ಲುವಂತಿಲ್ಲ. ನಮಸ್ಕಾರ."

ಲೀಲಾವತಿ—"ಹಾಗಾದರೆ ಹೋಗಿಬನ್ನಿ—ಆದಷ್ಟು ಬೇಗನೆ ಬರಬೇಕೆಂದು ಶಶಿಕಲೆಯೂ ಹೇಳುತ್ತಾಳೆ, ನಮಸ್ಕಾರ."

ಪಾರ್ವತಿಯು ಹಿಂದಿರುಗಿ ಹೋದಳು. ಶಶಿಕಲೆಯು ಲೀಲಾವತಿಯ ಸಮೀಪದಲ್ಲಿ ಬಂದುಕುಳಿತಳು. ಹಾಗಾದರೆ ಈ ಲೀಲಾವತಿ ಯಾರು? ಸೂಲಗಿತ್ತಿ.

---

# ತಾರೆಯಿರುವಲ್ಲಿ

ಪಾರ್ವತಿಯು ಹಿಂದಿರುಗಿ ಮನೆಗೆ ಬಂದಾಗ ರಾತ್ರಿಯ ಒಂಬತ್ತು ಗಂಟೆಯಾಗಿತ್ತು. ಒಂದೇ ದಿನದಲ್ಲಿ ಎರಡು ಅಪರಿಚಿತ ಸ್ಥಳಗಳಲ್ಲಿ ಇಬ್ಬರನ್ನು ಸಾಹಸಗೆಯ್ಯಲೆಂದು ತಂತ್ರವನ್ನೆಸಗಿದ ತನ್ನ ಸಾಮರ್ಥ್ಯವನ್ನು ತಾನೇ ಮೆಚ್ಚಿ ಕೊಂಡಳು.

ಆಗ ಊಟದ ವೇಳೆಯಾದುದರಿಂದ ಹಲವು ಮೋಹಿನಿ ಯರು ಇವಳ ಬರುವಿಕೆಯನ್ನೇ ಎದುರುನೋಡುತ್ತಿದ್ದರು. ಆಹಾರವಿಹಾರವೇ ಮೊದಲಾದುವುಗಳಲ್ಲಿ ಪಾರ್ವತಿಯು ಹಿಡಿತಡೆಯಿಲ್ಲದೆ ವೆಚ್ಚಮಾಡುತ್ತಿದ್ದಳು. ಇವಳು ತನ್ನಲ್ಲಿ ದ್ದವರು ವಿಲಾಸೀ ಜೀವನವನ್ನು ನಡೆಸುವುದಕ್ಕೆ ಅನುಕೂಲೆ ಯಾಗಿದ್ದಳಲ್ಲದೆ ಅವರಿಗೆ ಸಂತೋಷವಾಗುವಂತೆ ವೇತನ ವನ್ನು ಕೊಡುತ್ತಿದ್ದಳು. ಒಟ್ಟಿನಲ್ಲಿ ಅವರೊಂದು ವೇಳೆ ಇವಳ ಮಕ್ಕಳಾಗಿದ್ದರೆ ಇಂತಹ ಸೌಖ್ಯವನ್ನು ಹೊಂದುವ ರೆಂಬುದು ಸಂದೇಹಾಸ್ಪದವಾಗಿತ್ತು. ಏಕೆಂದರೆ ಎಲ್ಲವನ್ನೂ ತೂಗಿ ನೋಡಿ ಕೆಲಸ ಮಾಡತಕ್ಕವಳಿವಳು. ಸುಂದರಿಯ ರಿಂದ ಇವಳಿಗೆ ಬಹು ಪ್ರಯೋಜನವಿತ್ತು; ಇವಳ ಸ್ತುತ್ಯ ಕಾರ್ಯವನ್ನು ಸಫಲಗೊಳಿಸುವ ಮೂಲಕವಾಗಿ ಇವಳ ಧನದಾಶೆಯನ್ನು ಅವರು ತಾವರಿಯದೆಯೇ ಶಾಂತಮಾಡು ತ್ತಿದ್ದರು.

ಊಟವಾದನಂತರ ಸಂಗೀತಶ್ರವಣವಾಗುತ್ತಿತ್ತು; ಮಲಗುವ ವೇಳೆಯು ಬಂದೊಡನೆ ಅವರವರು ತಮ್ಮ ತಮ್ಮ ಶಯ್ಯಾಗಾರಗಳನ್ನು ಸೇರುತ್ತಿದ್ದರು.

ಎಂದಿನಂತೆ ಈ ದಿನವೂ ಪಾರ್ವತಿಯು ಮಲಗಿಕೊಂಡಳು. ಕುತಂತ್ರನಿರ್ಮಾಣಕಳಾದರೂ ಚಿಂತಾತಿರೇಕದಿಂದ ಇವಳಿಗೆ ನಿದ್ರೆಯು ಬಾರದಿರುತ್ತಿರಲಿಲ್ಲ. ಈ ದಿನವೇಕೋ ಕೆಟ್ಟ ಕನಸುಗಳಿಂದ ಅವಳಿಗೆ ಶಾಂತನಿದ್ರೆಯಿಲ್ಲದಂತಾಯಿತು. ದುರ್ದೈವಿಯಾದ ಶಶಿಕಲೆಯ ಬಟ್ಟೆನೊಗದ ಚಿತ್ರವು ಬೇಡವೆಂದರೂ ಒಳಗಣ್ಣಿನ ಮುಂದೆ ಬಂದು ನಿಲ್ಲುತ್ತಿತ್ತು. ಈಗ ಲೋಕಾಂತರವಾಸಿಗಳಾಗಿರುವ ಇವಳ ತಾಯಿತಂದೆಗಳಿಗೆ ತಾನಿತ್ತ ವಚನವನ್ನು ಭಂಗಪಡಿಸಿದುದೂ ಪರದೇಶಿಯಾದ ಶಶಿಕಲೆಯ ವಿಷಯದಲ್ಲೆಸಗಿದ ದ್ರೋಹವೂ ಅವಳ ಹೃದಯವನ್ನು ಕಲಕಿರಬಹುದು. ಅವಳ ಕನಸೊಂದರಲ್ಲಿ ಅನ್ಯಾಯದಿಂದ ನೊಂದ ಶಶಿಕಲೆಯು ಇದ್ದಕ್ಕಿದ್ದಂತೆ ಘೋರಾಕಾರಳಾಗಿ ಹಾರಿಬಂದು ಪಾರ್ವತಿಯ ಎದೆಯಮೇಲೆ ಕುಳಿತಂತೆ ಭಾಸವಾಗಲು, ಅವಳು ಬೆಚ್ಚಿಬಿದ್ದು, ಕಣ್ಣುಗಳನ್ನುಜ್ಜುತ್ತಾ ಮೇಲಕ್ಕೆದ್ದಳು. ಆಗ ಗಡಿಯಾರದಲ್ಲಿ ಒಂದೂವರೆ ಗಂಟೆಯಾಗಿತ್ತು. ಕೋಣೆಯಲ್ಲಿ ದೀಪವು ಮಿಣಿಗುಟ್ಟುತ್ತಿತ್ತು. ಅವಳಿಗೆ ಮಲಗಿಕೊಳ್ಳುವ ಧೈರ್ಯವಾಗಲಿಲ್ಲ. ಕ್ರೂರ ಕನಸಿಗೆ ಬಹು ಬೆದರಿದ್ದಳು. ಆಗೊಂದು ವಿಚಿತ್ರಧ್ವನಿಯು ಕೇಳಬಂದಿತು. ಪಾರ್ವತಿಯು ಬಾಗಿಲ ಬಳಿಗೆ ಬಂದು ನಿಂತಳು. ಅವಳಿಗೆ ಜೀವದಲ್ಲಿ ಜೀವವಿರಲಿಲ್ಲ.

ಅವಳು ಉಸಿರಾಡದಂತೆ ಲಕ್ಷ್ಯವಿಟ್ಟು ಕೇಳಿದಳು—ಎಲ್ಲೆಲ್ಲಿಯೂ ನಿಶ್ಯಬ್ದ.

ಕೆಲಕಾಲಾನಂತರ ಅವಳೊಂದು ಗುಟುಕು ನೀರು ಕುಡಿದಳು. ತಾಲಿಯನ್ನು ಕೆಳಗಿಟ್ಟಳೋ ಇಲ್ಲವೋ ಎನ್ನುವಷ್ಟರಲ್ಲಿ

ಪುನಃ ಅದೊಂದು ತರದ ಧ್ವನಿಯಾಯಿತು. ಈ ಸಲ ಅದು ನಿಲ್ಲಲಿಲ್ಲ; ಒಂದೇ ಸವನೆ ಸಾಗಿತ್ತು. ಅವಳು ಅದೇನೆಂದು ಬಹು ಭ್ರಾಂತಳಾದಳು. ಒಮ್ಮೆಲೇ ಹೊಳೆಯಿತು, ಗರಗಸ ದಿಂದ ಕೊರೆಯುವ ಶಬ್ದವದೆಂದು.

ಪಾರ್ವತಿಯ ಪ್ರಕೃತಿಸಿದ್ಧವಾಗಿ ಧೈರ್ಯವಂತಳು; ಇದಲ್ಲದೆ ತನ್ನ ಮನೆಯಲ್ಲಿ ಆಗ ಮೂವರು ಪುರುಷರಿದ್ದುದು—ಭೀಮರಾಯನೂ ಇಬ್ಬರು ಆಳುಗಳೂ ಇದ್ದುದು—ಅವಳಿಗೆ ಗೊತ್ತಿತ್ತು. ಅವರ ಬೆಂಬಲವನ್ನು ನಂಬಿ, ಅವಳು ನಿಧಾನವಾಗಿ ಅಟ್ಟದ ಮೆಟ್ಟಿಲುಗಳ ಬಳಿಗೆ ಬಂದು ನಿಂತಳು. ಆಧ್ವನಿಯೂ ಆಗನಿಂತಿತ್ತು. ಕೆಳಭಾಗದಲ್ಲಾರೋ ಪಿಸುವಾತಿನಲ್ಲಿ ನುಡಿಯುತ್ತಿದ್ದರು. ಗಂಡಾಂತರದ ಸಮಯದಲ್ಲಿ ನಮ್ಮ ಇಂದ್ರಿಯಗಳು ಹೆಚ್ಚು ಸೂಕ್ಷ್ಮವಾಗುವಂತೆ ಕಂಡುಬಂದಿದೆ. ಒಂದೆರಡು ನುಡಿಗಳನ್ನು ಕೇಳಿದೊಡನೆ ಬಂದವರು ಚೋರರೆಂದು ಅವಳ ಭಾವನೆಯಾಯಿತು. ಆದರೆ ಭೀಮರಾಯನನ್ನೆಬ್ಬಿಸುವುದು ವಿಹಿತವಲ್ಲವೆಂಬುದಕ್ಕೆ ಸಾವಿರ ಕಾರಣಗಳು ಮರುಕ್ಷಣದಲ್ಲಿಯೇ ಮುಂದೆ ನುಗ್ಗಿ ನಿಂತುವು; ಯಾರಿಂದಲೂ—ಕಳ್ಳಕಾಕರಿಂದಲೂ ಸಹ- ಅವನು ಅಕಸ್ಮಾತ್ತಾಗಿಯಾದರೂ ಗುರುತಿಸಲ್ಪಡಬಾರದಾಗಿತ್ತು. ಆಳುಗಳು ಮನೆಯ ಮತ್ತೊಂದು ಭಾಗದಲ್ಲಿ ಮಲಗಿದ್ದುದರಿಂದ ಅತ್ತ ಹೋಗಿ ಅವರನ್ನೆಬ್ಬಿಸುವುದೂ ಅಸಾಧ್ಯವೆನಿಸಿತು. ಆದರೇನು ಮಾಡುವುದು ?

ನಿಮಿಷಗಳು—ಅದೇಕೆ? ಸೇಕಂದುಗಳು—ಓಡುತ್ತಿದ್ದುವು. ಪ್ರತಿ ಸೇಕಂದಿಗೂ ಬಹುಮಹತ್ವವಿತ್ತು !! ಸುಂದರೀಮಣಿಗಳನ್ನೂ ಹೆಣ್ಣಾಳುಗಳನ್ನೂ ಎಬ್ಬಿಸಿ ಫಲವಿಲ್ಲ. ಏಕೆಂದರೆ ಈ

ಕಾರ್ಯದಿಂದ ಗೊಂದಲವೇಳಬಹುದು; ಅದರಿಂದ ಕಳ್ಳರ ಕಾರ್ಯಕ್ಕೆ ಆತಂಕವುಂಟಾಗದು.

ಆದುದರಿಂದ ಅವಳು ಬಹುಮೆಲ್ಲನೆ ಕೆಳಗಿಳಿದು ಆಳುಗಳಿದ್ದೆಡೆಗೆ ನಡೆಯಲಾರಂಭಿಸಿದಳು. ಅಷ್ಟರಲ್ಲಿ ಅಡಿಗೆಯ ಮನೆಯ ಕಡೆಯಿಂದ ಬಂದ ಬೆಳಕು ಇವಳ ಮೊ.ಿಯ ಮೇಲೆ ಬಿತ್ತು. ಆ ಬೆಳಕಿನಲ್ಲಿ ಅತಿ ಉತ್ಸಾಹಿತ ್ಪನಾಶಕ್ತಿಯು ಚಿತ್ರಿಸಿಕೊಳ್ಳುವಷ್ಟರ ಾಟ್ಟೆಗಿನ ಕ್ರೂರ ಚೋರನ ಮುಖ ಮುದ್ರೆಯು ಪ್ರತ್ಯಕ್ಷವಾಯಿತು.

ಚೀತ್ಕಾರವು ಅವಳ ತುಟಿಯ ವರೆಗೂ ನುಗ್ಗಿ ಬಂದಿತು; ಹೊರಬೀಳಲಾಗಲಿಲ್ಲ. ಅದು ಚೋರದರ್ಶನಕ್ಕೆ ಬೆದರಿ ನಿಲ್ಲಲಿಲ್ಲ; ಅವಳ ವಿಚಿತ್ರಮನಃಸ್ಥಿತಿಯ ಪರಿಣಾಮವಾಗಿ ಅದು ಅಲ್ಲಿಯೇ ನಿಃಸ್ಪನವಾಯಿತು. ಅವಳೊಂದು ಮಂತ್ರ ಶಕ್ತಿಯಿಂದ ಬಿಗಿಯಲ್ಪಟ್ಟಂತಾಗಿ ಚಿತ್ರಿತ ಶವದಂತಿದ್ದಳು. ಆ ಪ್ರದೇಶವೂ ದಿಗ್ಬಂಧಿತವಾದಂತಿತ್ತು.

ಕ್ಷಣಾರ್ಧದ ವರೆಗೂ ಚೋರನೂ ಇವಳೂ ಒಬ್ಬರನ್ನೊಬ್ಬರು ನೆಟ್ಟ ದಿಟ್ಟಿಯಿಂದ ನೋಡುತ್ತಾ ನಿಂತಿದ್ದರು— ಅವನು ತನ್ನ ಕಣ್ಣನ್ನೇ ನಂಬದೆ ದೀಪವನ್ನೆತ್ತಿಹಿಡಿದು ನಿಂತಿದ್ದನು; ಇವಳು ಈ ಆಕೃತಿಯು ತನಗಪರಿಚಿತವಲ್ಲವೆಂದು ಚಿಂತಿಸುತ್ತಾ ಅರ್ಧಮರ್ಧ ಗೋಡೆಗೊರಗಿದ್ದಳು.

ಅಷ್ಟರಲ್ಲಿ ಮತ್ತೊಬ್ಬ ಅಪರಿಚಿತ ಚೋರಸಹಾಯಕನು ಬಂದನು. ಪಾರ್ವತಿಯು ಅವರಿಬ್ಬರಿಂದ ಪಾರಾಗುವ ಮಾರ್ಗವನ್ನು ಮೊದಲು ಚಿಂತಿಸಿ, ಕೊನೆಗೆ ಅವರನ್ನು ಕೈಸನ್ನೆಯಿಂದ ಕರೆದಳು.

ಸುಮಾರು ೩೦ ನಿಮಿಷಗಳವರೆಗೂ ಪಾರ್ವತಿಯು ಅವ

ರೊಡನಿದ್ದಳು. ಅವರ ಮಾತುಕಥೆಯ ವಿಷಯವಾಗಿ ನಾವು ಸದ್ಯಕ್ಕೆ ಏನನ್ನೂ ತರ್ಕಿಸಹೋಗುವುದಿಲ್ಲ. ಅವರತ್ತ ಹೋದೊಡನೆ ಇವಳಿತ್ತ ಬಂದಳು. ಮುಖವು ಮೊದಲಿಗಿಂತಲೂ ಕಳೆಗೆಟ್ಟಿತ್ತು. ಆ ದರೋಡೆಖೋರರು ಬರಿಗೈಯಿಂದ ಹೋದರೋ ಇಲ್ಲವೋ ಹೇಳಲಾರೆವು. ಆದರೆ ಮನೆಯಲ್ಲಿಯ ಬೆಲೆಬಾಳುವ ವಸ್ತುಗಳಾವುವೂ ಹೋಗಿರಲಿಲ್ಲ. ಪಾರ್ವತಿಯೇ ಅವರನ್ನು ಬಾಗಿಲಿನ ವರೆಗೂ ಬಂದು ಕಳುಹಿದಳು.

ರಾತ್ರಿಯಲ್ಲಿ ಅವಳು ಕಣ್ಣಿಗೆ ಕಣ್ಣು ಹಚ್ಚಲಿಲ್ಲ. ಕ್ರೂರ ರಾತ್ರಿಯಲ್ಲಿ ಬಂದ ಆ ಭಯಂಕರ ಮೂರ್ತಿಯು ಪುನಃ ಬರಬಾರದೆನ್ನುತ್ತಿದ್ದಳು.

ಬೆಳಗಿನ ಆರು ಗಂಟೆಗೆ ಕೆಲಸದವಳು ಬಂದು, ಕಳವಾಗಿದೆಯೆನ್ನಲು, ಇವಳು ಮೊದಲು ಬೆದರಿದಂತೆ ನಟಿಸಿ, ನಂತರ ಬಾಗಿಲುಗಳನ್ನು ಪರೀಕ್ಷಿಸಿ, ಮನೆಯಲ್ಲಾವ ವಸ್ತುವೂ ಹೋಗಿಲ್ಲವಾದುದರಿಂದ ಕಳ್ಳರು ತಮ್ಮ ಕಾರ್ಯದಲ್ಲಿ ವಿಘ್ನವುಂಟಾಗಲು ಕೃತಕಾರ್ಯರಾಗದೆ ತೆರಳಿರುವರೆಂದು ತಿಳಿಸಿದಳು.

ಕೆಲ ಕಾಲಾನಂತರ ಶಿವಪ್ರಸಾದನು ಬಂದು "ಬಾಯೀ, ಹೇಳಿರಿ. ತಾರೆಯಿಲ್ಲಿಂದ ತೆರಳಿರುವಳಷ್ಟೇ ?" ಎಂದು ಕಾತರನಾಗಿ ಕೇಳಿದನು.

"ಇನ್ನೂ ಇಲ್ಲ. ನೀವು ಕಾತರಿಸುವುದೇಕೆ ? ಅವಳ ಹಾಲಿನಲ್ಲಿ ಅಫುವನ್ನು ಬೆರೆಸಿ ಕೊಟ್ಟಿದ್ದುದರಿಂದ ಅವಳಿಗಿನ್ನೂ ನಿದ್ರೆಯು ಮುಗಿದಿರಲಿಕ್ಕಿಲ್ಲ."

"ಅವಳು ಕ್ಷೇಮವಷ್ಟೇ?"

"ಹೀಗೇಕೆ? ನಿಮ್ಮ ಮಾತಿನ ತಾತ್ಪರ್ಯವೇನು?"

"ಪಾರ್ವತೀ, ಹೆಚ್ಚಿನ ವಿವರವು ಈಗ ಬೇಡ. ಹಿಂದಿನಿಂದೆಲ್ಲವೂ ಸ್ಪಷ್ಟವಾಗುವುದು. ನಿನ್ನೊಡನೆ ನಾನು ಮಾತನಾಡುವುದು ಬಹಳವಿದೆ. ನಾವೆಣಿಸಿದಂತೆ ನನ್ನ ಕಾರ್ಯವಾಗಲಿಲ್ಲ. ಪ್ರಯತ್ನವು ಫಲಿಸದಿದ್ದುದಕ್ಕಾಗಿ ನನಗೆ ವ್ಯಸನವಾಗಿಲ್ಲ."

"ಪ್ರತಿಶಬ್ದವೂ ಒಗಟೇ !!"

"ಹಿಂದಿನಿಂದೆಲ್ಲವನ್ನೂ ಹೇಳುವೆನು. ತಾರೆಯೀಗ ಹೋಗಬೇಕು. ಅವಳ ತಂದೆಯು ಬಂದಿದ್ದಾನೆ. ಯಾರಗುಟ್ಟೂ ರಟ್ಟಾಗಿಲ್ಲ."

ಅಷ್ಟರಲ್ಲಿ ಕುಸುಮೆಯು ಬಂದಳು. ಭೀಮರಾಯನು ಹೊರಟುಹೋಗಿಬಿಟ್ಟಿರುವುದರಿಂದ ತಾರೆಯು ಅತಿ ಅಧೀರಳಾಗಿರುವಳೆಂದು ಅವಳೆನ್ನಲು ಶಿವಪ್ರಸಾದನು ಅವಳನ್ನಿಲ್ಲಿಗೆ ಕರೆತಾರೆಂದನು.

ಲೀಲೆಯೊಡನೆ ಮಾತನಾಡಿದಂತೆ ಇವನ್ನೆಲ್ಲವನ್ನೂ ತಾರೆಗೆ ವಿವರಿಸಿದನು. ಪಾರ್ವತಿಯು ಅವಳಿಗೆ ಧೈರ್ಯವನ್ನು ಹೇಳಿದಳು. ಆದರೆ ಎಲ್ಲವನ್ನೂ ತಾರೆಯು ಗ್ರಹಿಸುವ ಸ್ಥಿತಿಯಲ್ಲಿದ್ದಂತೆ ತೋರಲಿಲ್ಲ. ಲಗುಬಗೆಯಿಂದ ಅವಳು ಕುದುರೆಯ ಗಾಡಿಯನ್ನೇರಿ ಮನೆಗೆ ಹೊರಟಳು.

---

## ರುಕ್ಮಿಣಿಯೂ ರಾಜಪುತ್ರನೂ

ರಾತ್ರಿಯ ಹತ್ತು ಗಂಟೆಯಾಗಿತ್ತು. ರಾಜಪುತ್ರನು ಮಧ್ಯರಾತ್ರಿಯ ಸುಮಾರಿಗೆ ಭೋಜನವನ್ನು ತಂದಿರಿಸ

ಬೇಕೆಂದು ಅಜ್ಞಾಪಿಸಲು, ಸೇವಕನು ಬಾಗಿಲನ್ನು ತೆರೆದು ಹೊರಹೊರಟನು. ಅದು ನಮ್ಮ ವಾಚಕರಿಗೆ ಪರಿಚಿತವಾದ ಕೊಠಡಿಯಾಗಿತ್ತು. ಅವನತ್ತ ನಡೆದೊಡನೆ ರಾಜಪುತ್ರನು ಆ ಬಾಗಿಲನ್ನಿಕ್ಕಿ ಬೀಗವನ್ನು ಹಾಕಿದನು. ಮರುಕ್ಷಣ ದಲ್ಲಿಯೇ ಗುಪ್ತಸೋಪಾನದ ದ್ವಾರವು ತೆರೆಯಲ್ಪಟ್ಟಿತು.

ಅರವಿಂದನನ್ನು ಮುಂದುಮಾಡಿಕೊಂಡು ಕೆಲ ನಿಮಿಷ ಗಳಲ್ಲಿಯೇ ರುಕ್ಮಿಣಿಯು ಒಳಕ್ಕೆ ಬಂದಳು. ಇವಳ ವೇಷವು ಹಿಂದಿನಂತಿದ್ದರೂ ರಾಜಪುತ್ರನ ಕಣ್ಣಿಗೆ ಇವಳು ಹೆಚ್ಚು ಸುಂದರಳಾಗಿ ತೋರಿಬಂದಳು.

ಅರವಿಂದನು ಕೈಮುಗಿದು "ಸ್ವಾಮೀ, ಈಗ ಾವ ಕಾರ್ಯವಿದೆ? ಈ ವಿಷಯದಲ್ಲಿ ರುಕ್ಮಿಣಿಯೂ ಸಹಾಯ ಮಾಡಬಲ್ಲಳೇ?" ಎಂದನು. ರಘುನಾಥನ ಮುಖವರಳಿತು. ರುಕ್ಮಿಣಿಯು ತಲೆಯ ಮೇಲಿನ ಮುಂಡಾಸವನ್ನೂ ಮೈ ಮೇಲಿನ ಬಟ್ಟೆಯನ್ನೂ ಒಂದೊಂದನ್ನಾಗಿ ಕಳೆದೊಗೆದು ಶ್ವೇತಾಂಬರಧಾರಿಯಾದಳು.

ಸರಸಸಲ್ಲಾಪಾನಂತರದಲ್ಲಿ ಮುಖ್ಯ ಮಾತಿಗಾರಂಭ ವಾಯಿತು.

"ಅರವಿಂದಾ, ನಾಳಿನ ದಿನದೊಳಗಾಗಿ ಕಡಿಮೆಯಾಗಿರು ವಷ್ಟನ್ನು ತಂದು ತುಂಬಬೇಕಾಗಿರುವುದು. ಈ ಕೆಲಸವು ನಿನ್ನೆಯೇ ನಡೆದಿದ್ದರೆ ಹೆಚ್ಚು ಹಿತಾವಹವಾಗಿತ್ತು. ಈ ರಾತ್ರಿಯ ವರೆಗೂ ಬರಬಾರದೆಂದು ನಿನಗೆ ನಾನು ಹೇಳಿ ಕಳಿಸಿರಲಿಲ್ಲವೇ? ನಾನು ಬೇರೊಂದು ಕೆಲಸದಲ್ಲಿದ್ದೆ; ಉಪಾಯವಿಲ್ಲದಾಯಿತು. ಇನ್ನೀ ಕೆಲಸವನ್ನು ತಡಮಾಡು ವಂತಿಲ್ಲ."

"ನಡೆದ ಸಂಗತಿಯೇನು? ಇಷ್ಟು ಅವಸರವೇಕೆ?"

"ಇದೇನು ಹೊಸ ಸಂಗತಿಯಲ್ಲ. ನನಗೆ ಇಪ್ಪತ್ತಾರು ಸಾವಿರ ನಾಣ್ಯಗಳನ್ನು ಕೋನಪ್ಪನು ಕೊಟ್ಟಿರಲಿಲ್ಲವೇ—ಈಗ ಮೂರು ವರುಷಗಳ ಹಿಂದೆ, ನನ್ನದೊಂದು ಸಾದಾ ಚೀಟಿಯ ಮೇಲೆ—"

"ಏಕೆ? ಭಾವೀ ಮಹಾರಾಜರು ಈಗೊಂದು ವರುಷದ ಹಿಂದೆ ದೀಪಾವಳಿಯ ವೇಳೆಗೆ ಸ್ವತಃ ಅದನ್ನು ತೀರಿಸಲಿಲ್ಲವೇ? ನಿಮಗೂ ಅವರಿಗೂ ಭೇಟಿಯಾಗಲು ಅನುಕೂಲವನ್ನು ನಾನೇ ಮಾಡಿಕೊಡಲಿಲ್ಲವೇ? ಅವರಿಗೊಪ್ಪಿಸಲು ಧನವನ್ನು ಸಹ ತಂದು ನಾನು ನಿಮ್ಮ ಕೈಯಲ್ಲಿಡಲಿಲ್ಲವೇ? ಕೋನಪ್ಪನು ಬಡ್ಡಿಯಲ್ಲಿ ೨೫% ರಷ್ಟನ್ನು ಬಿಟ್ಟುಕೊಡುವೆನೆಂದು ಒಪ್ಪಿಕೊಂಡುದು ಇನ್ನೂ ನನ್ನ ನೆನಪಿನಲ್ಲಿದೆ."

"ಪ್ರಿಯ ಅರವಿಂದಾ, ಅದೆಲ್ಲವೂ ಸಂಪೂರ್ಣಸತ್ಯ. ಈಗೆಂದುದೆಲ್ಲವನ್ನೂ ನೀನು ಮಾಡಿರುವುದು ದಿಟ. ಆದರೆ ಆ ದಿನ ನೀನಿತ್ತ ಹಣವು ಬೇರೊಂದು ಪರಿಯಲ್ಲಿ ತೀರಿಹೋಯಿತೆನ್ನುವುದು ಸಹ ಅದರಂತೆಯೇ ಸತ್ಯ."

"ನೀವೇಕೆ ಅದನ್ನು ಈ ವರೆಗೂ ಹೇಳಲಿಲ್ಲ? ನೀವಿಂತು ನಿಮ್ಮ ದಾರಿಯಲ್ಲಿಯೇ ನಡೆಯುತ್ತಾ ನನ್ನಿಂದ ವಿಷಯವನ್ನು ಮರೆಮಾಡಿಡುತ್ತಾ ಇರುವಾಗ ನಾನಿಂತಹ ಕಾರ್ಯವನ್ನೆಂತು ಕೈಕೊಳ್ಳಲಿ?"

"ಅರವಿಂದಾ, ನೀನಿಂತು ನುಡಿಯತಕ್ಕುದಲ್ಲ. ಜೋಕೆ, ಇಂತಹ ಸಂದರ್ಭದಲ್ಲಿ—"

"ರಾಜಪುತ್ರರೇ, ನಾವೀಗ ಎಲ್ಲ ತೊಂದರೆಗಳನ್ನೂ ಎದುರಿಸತಕ್ಕುದು. ನೀವಿನ್ನು ಇದ್ದುದನ್ನಿದ್ದಂತೆ ತಡ

ಮಾಡದೆ ಹೇಳಿಬಿಡಬೇಕು. ''

"ಹೀಗೆ ಧಾರಿಗೆ ಬಾ. ಈ ಕೋನಪ್ಪನು ಈಗ ದಿವಾಳಿಯಾಗುತ್ತಿದ್ದಾನೆ. ದುರ್ದೈವವು ಅವನನ್ನು ಬೇಟೆಯಾಡುವಂತಿದೆ. ನಾಳೆಯ ಮಧ್ಯಾಹ್ನದ ಮೂರು ಗಂಟೆಯ ಒಳಗಾಗಿ ಅವನು ಮೂವತ್ತು ಸಾವಿರವನ್ನು ಹಾಜರಪಡಿಸದಿದ್ದರೆ ಅವನ ಸರ್ವನಾಶವಾಗುವುದು. ನಾನು ಆ ದಿನ, ಅವನು ಅಂದು ಹಣವನ್ನು ತಂದು ಕೊಟ್ಟಿಡೆಯಲ್ಲಿಯೇ ಬಂದು ಭೆಟ್ಟಿಯಾಗುವೆನೆಂದು ಭರವಸೆಯನ್ನು ಕೊಟ್ಟಿದ್ದೆ. ಏಕೆಂದರೆ ಈ ವರ್ತಕರಂಥವರು ಇಲ್ಲಿಗೆ ಬರಲಾಗದು."

"ಅದು ಸರಿ. ಇತ್ತ ಕಡೆಗೆ ಸಹ ಅವರಂಥ ನಿಕೃಷ್ಟರು ನೋಡಲಾಗದು." ತನ್ನ ಹಿಂದಿನ ಹೀನಸ್ಥಿತಿಯನ್ನು ಮರೆತು ವರ್ತಕರನ್ನು ಅತಿ ತುಚ್ಛರೆಂದೆಣಿಸಿ ರುಕ್ಮಿಣಿಯು ನುಡಿದಳು.

"ನಾನು ಮೊದಲೇ ಗೊತ್ತುಪಡಿಸಿದಂತೆ ಆ ದಿನ ಇಂದ್ರಭವನಕ್ಕೆ ಹೋದೆ, ಅದರ ಮಾಲಕನು ನನ್ನನ್ನು ಗುರುತಿಸಿ ವಂದಿಸಿ ಬೇರೊಂದು ಕೊಠಡಿಯಲ್ಲಿ ಕುಳ್ಳಿರಿಸಿದನು. ಇಡೀ ಇಂದ್ರಭವನವೆಲ್ಲಾ ಜನಮಯವಾಗಿತ್ತು; ನಾನಿರುವಲ್ಲಿಯೂ ಕೆಲವರಿದ್ದರು. ನಾನು ಮೋರೆಯನ್ನು ಮರೆಮಾಡಿಕೊಂಡಿರುವ ಉದ್ದೇಶದಿಂದ ಕೆಳಮೊಗನಾಗಿ ಫಲಾಹಾರವನ್ನು ಮಾಡಹತ್ತಿದೆನು. ಎದುರಿನಲ್ಲಿದ್ದ ವ್ಯಾಪಾರಿಗಳ ಪ್ರಯಾಣಿಕನೊಬ್ಬನು ನನ್ನನ್ನೇ ಕೆಲಕಾಲ ದಿಟ್ಟಿಸಿನೋಡಿ, ತನಗೆ ನನ್ನ ಗುರುತುಂಟೆಂದು ನಿರ್ಭಿಡೆಯಿಂದ ನುಡಿದುಬಿಟ್ಟನು. ಆಗ ನಾನು ನನ್ನ ಬರುವಿಕೆಯಿಂದಲೇ ನನ್ನಿಷ್ಟವು ಗುಪ್ತವಾಗಿರಬೇಕೆಂಬುದು ತಿಳಿಯುವುದಿಲ್ಲವೇ ಎಂದು ಗರ್ಜಿಸಲು,

ಅವನು ನಾನಾರೆನ್ನುವ ವಿಷಯದಲ್ಲಿ ತನಗಿನ್ನು ಸಂಶಯವು ಉಳಿಯಲಿಲ್ಲವೆಂದು ಚಪ್ಪಾಳೆಯನ್ನಿಕ್ಕಿದನು. ಎಂತಹ ಸಂದರ್ಭದಲ್ಲಿಯೇ ಆಗಲಿ ನನ್ನಂಥವನು ಹುಂಬನಂತೆ ಅಂಥಲ್ಲಿಗೆ ಹೋಗುವುದೆಂಥಾ ದಡ್ಡತನವೆಂದುಕೊಂಡು—ಕೋನಪ್ಪನು ಬರುವ ವೇಳೆಯು ಮೀರಿತೆಂದು ಆಗ ಗಡಿಯಾರವು ತಿಳಿಸಲು—ಆ ಭೋಜನಾಲಯದಿಂದ ಹೊರಬಿದ್ದೆನು. ಆದರೆ ಕೋನಪ್ಪನು ನನ್ನ ಅರಮನೆಗೆ ಬರತಕ್ಕುದಲ್ಲವೆಂದು ಭಾವಿಸಿ ಅವನ ಮನೆಗೆ ಹೋಗಬೇಕೆಂದು ದುರ್ಗದ ಮಾರ್ಗವಾಗಿ ಕುದುರೆಯ ಬಂಡಿಯಲ್ಲಿ ಕುಳಿತು ನಡೆದೆನು. ಆದರೆ ಆ ಪ್ರಯಾಣಿಕನ ದೆಸೆಯಿಂದ ನನಗೆ ಬಹು ತೊಂದರೆಯಾಯಿತು. ಯಾರೋ ಹಿಂಬಾಲಿಸಿ ಬರುವರೆಂಬುದನ್ನರಿತೊಡನೆ ನಾನು ಬಂಡಿಯಿಂದಿಳಿದು ಓಡಿಹೋದೆನು. ಏಕೆಂದರೆ ನನ್ನ ಬರುವಿಕೆಯಿಂದ ಇಲ್ಲದ ಸಲ್ಲದ ಅಪವಾದವು ನನಗೆ ತಗಲುವ ಸಂಭವವಿತ್ತು."

"ಇದರ ಮುಕ್ತಾಯವು ಕೋನಪ್ಪನನ್ನು ಕಾಣಲಾಗಲಿಲ್ಲವೆಂದಲ್ಲವೆ?"

"ಅಹುದು, ಕೋನಪ್ಪನನ್ನು ಕಾಣಲಾಗಲಿಲ್ಲ."

"ಈ ಅಂಕವು ಇಲ್ಲಿಗೇ ಮುಗಿಯಲಿಲ್ಲ. ಕೋನಪ್ಪನು ನನಗೊಂದು ಪತ್ರವನ್ನು ಬರೆದಿದ್ದಾನೆ. ಅದರಲ್ಲಿ ತಾನು ಕಾಲಕ್ಕೆ ಸರಿಯಾಗಿ ಬಂದು ನನ್ನನ್ನು ಕಾಣದಿದ್ದುದಕ್ಕಾಗಿ ಕೋಟಿ ಬಾರಿ ಕ್ಷಮಾಪಣೆಯನ್ನು ಕೇಳಿಕೊಂಡಿರುವನಲ್ಲದೆ ನಾಳೆ ಮಧ್ಯಾಹ್ನದ ಮೂರು ಗಂಟೆಯೊಳಗಾಗಿ ಮೂವತ್ತು ಸಾವಿರ ರೂಪಾಯಿಗಳನ್ನು ಬೇರೊಬ್ಬ ವರ್ತಕಸಂಘದವನಿಗೆ ಸಲ್ಲಿಸದಿದ್ದರೆ ತನ್ನ ಸರ್ವನಾಶವಾಗುವುದೆಂದೂ ಹೇಗಾ

ದರೂ ತನ್ನನ್ನುಳಿಸಬೇಕೆಂದೂ ಬೇಡಿಕೊಂಡಿದ್ದಾನೆ. ಅದರಿಂದಾ, ಈಗಿದು ಸಾಧ್ಯವೇ? ಹಾಗಾದರೆ ದಾರಿಯಾವುದು? ನಾನು ನನ್ನ ರಾಜಪುತ್ರತ್ವವನ್ನು ಒತ್ತೆಯಿಟ್ಟರೂ ೧೫ ಸಾವಿರವು ಸಹ ಸಿಕ್ಕುವಂತಿಲ್ಲ. ನನ್ನ ಹೆಸರಿಗೆ ಈಗಾಗಲೇ ಕಳಂಕವು ಹತ್ತಿದಂತಿದೆ—ಉಚಿತವೆನಿಸದಷ್ಟರ ಮಟ್ಟಿಗೆ ನನ್ನ ಸಾಲವಿದೆ—ಈಗಂತೂ ನನ್ನ ಸ್ಥಿತಿಯು ಬಹು ಸೂಕ್ಷ್ಮವಾಗಿದೆ; ಈ ಕೋನಪ್ಪನಿಂದ ಬಿಡುಗಡೆಯನ್ನು ಹೊಂದಲು ನಾನೇನು ಕೊಡಬೇಕಾದರೂ ಕೊಟ್ಟುಬಿಡುವೆನು. ಒಂದು ವೇಳೆ ಅವನು ದಿವಾಳಿಯೆನಿಸುವುದಕ್ಕೆ ನಾನೇ ಕಾರಣನೆಂದು ನಾಳೆ ಜನಜನಿತವಾದರೆ, ಎಂತಹ ಅನರ್ಥ!! "

" ನಮ್ಮ ಸರದಾರರಲ್ಲಿ—"

" ಅವರಲ್ಲಿ ಇಂಥ ವಿಷಯವನ್ನು ಬಹಿರಂಗಪಡಿಸಲಾಗದು. ನಮ್ಮ ಸರದಾರರು ನಮ್ಮ ದೆಸೆಯಿಂದ ಜನಗಳ ಮೇಲೆ ಗುಂಡಿನ ಮಳೆಯನ್ನು ಸಹ ಸುರಿಸಲು ಹಿಂದೆ ಮುಂದೆ ನೋಡುವವರಲ್ಲ. ರಾಜಭಕ್ತಿಯು ಅವರಲ್ಲಿಯೇ ಮನೆಮಾಡಿದೆ. "

" ನಮ್ಮ ಸರದಾರರು ಇತರ ದುರುಳ ದೇಶೀಯರಂತಲ್ಲ. ಈಗಂತೂ ಅಲ್ಲ, ರಾಜಭಕ್ತಿಗೆ ಕುಂದಿಲ್ಲ. "

" ಅದು ಹೇಗಾದರೂ ಇರಲಿ; ನಾನಿರುವವರೆಗಂತೂ ಸಿಂಹಾಸನವು ನಮ್ಮದೇ ಆಗಿರುವುದು. ಮುಂದೇನಾದರೂ ಆಗಿಹೋಗಲಿ! "

"ಈಗಂತೂ ಇಲ್ಲದ ರಾಜಕೀಯ ವಿಷಯವನ್ನು ತೆಗೆಯಬೇಡಿ. ದಿಲ್ಲಿಯ ಧನಿಕನೊಬ್ಬನು ಈಗಿನ ನನ್ನ ಪತಿಯಷ್ಟೇ. ಅವನು ತನ್ನ ಅಪಾರವಾದ ಹಣವನ್ನು ಲಾಭ

ದಾಯಕವಾಗುವಂತೆ ಎಲ್ಲಿಡಬೇಕೆಂದು ಅವರಿವರನ್ನು ವಿಚಾರಿಸುತ್ತಿದ್ದಾನೆ. ನಿಮಗವನು ಕೊಟ್ಟೇಕೊಡುವನು. ತಮ್ಮ ಸಹಿ ಮಾಡಿಕೊಟ್ಟ ಕಾಗದವೊಂದೇ ಅವನಿಗೆ ಸಾಕಾಗುವುದು. ನಿಮ್ಮಂಥವರು ಕೈಹಿಡಿದುದಕ್ಕೆ ಅವನಿಗೆ ಅತ್ಯಂತ ಸಂತೋಷವಾಗುವುದು; ಹಣದ ಸುರಕ್ಷಿತತೆಯನ್ನಂತೂ ಕೇಳುವ ಹಾಗಿಲ್ಲ."

"ರುಕ್ಮಿಣಿ, ನೀನಿಷ್ಟು ಉಪಕಾರವನ್ನು ಮಾಡುವೆಯೆಂದು ನಾನರಿತಿರಲಿಲ್ಲ. ಅರವಿಂದಾ, ಈ ಕಾರ್ಯವನ್ನು ಗುಪ್ತವಾಗಿ ನೆರವೇರಿಸತಕ್ಕುದು."

"ಇದನ್ನು ನನಗೊಪ್ಪಿಸಿರಿ. ಕೊಡುವವರ ತೆಗೆದುಕೊಳ್ಳುವವರ ಹೆಸರುಗಳು, ರಕಮು—ಇವುಗಳಿಗೆ ಸ್ಥಳವನ್ನು ಬಿಟ್ಟು ಪತ್ರವೊಂದನ್ನು ತಯಾರಿಸಿ ನಾನು ತರುವೆನು. ಎಲ್ಲ ವ್ಯವಹಾರವೂ ನಾಳೆ ಮಧ್ಯಾಹ್ನ ಒಂದು ಗಂಟೆಯೊಳಗಾಗಿ ಮುಗಿಯುವುದು. ಕೋನಪ್ಪನಿಗೆ ಮೂರು ಗಂಟೆಯವರೆಗೂ ವೇಳೆಯಿರುವುದರಿಂದ ನಾವಷ್ಟರಲ್ಲಿ ಮೂವತ್ತು ಸಾವಿರವನ್ನು ಸಲ್ಲಿಸಬಹುದು."

ರಾಜಪುತ್ರನಿಗೆ ಸಂತೋಷವಾಯಿತು.

ಅರವಿಂದನೆದ್ದು ಮಗ್ಗುಲಿನ ಬಾಗಿಲ ಕೀಲಿಯನ್ನು ತೆರೆದನು. ಕೂಡಲೇ ಸೇವಕನೊಬ್ಬನು ಬಂದು ಈಗೊಂದು ಗಂಟೆಯ ಹಿಂದೆ ಅದಾರೋ ಬಂದಿದ್ದರೆಂದೂ ರಾಜಪುತ್ರರಿಗೆ ವ್ಯವಧಾನವಿಲ್ಲದುದರಿಂದ ಒಳಗೆ ಬಿಡಲಾಗುವುದಿಲ್ಲವೆಂದು ಗದ್ದರಿಸಿ ಅವನನ್ನಟ್ಟಿದೆವೆಂದೂ ವಿವರಿಸಿದನು.

ಅವನಾರೆಂದೂ ಅವನೇನೆಂದನೆಂದೂ ರಾಜಪುತ್ರನು ಕೇಳಲು, ಅವನ ಹೆಸರು ಕೋನಪ್ಪಶೆಟ್ಟಿಯೆಂದೂ ತನಗೆ

ರಾಜಪುತ್ರರ ದರ್ಶನವಾಗಲೀ ಅಥವಾ ತನ್ನ ಪತ್ರಕ್ಕೆ ಉತ್ತರವಾಗಲೀ ದೊರೆಯದಿದ್ದರೆ ತನ್ನ ಅವತಾರವು ಮುಗಿದಂತಾಯಿತೆಂದು ಆವನೆಂದನೆಂದೂ ಸೇವಕನರುಹಿದನು.

ಮೂವರೂ ಪರಸ್ಪರರ ಮೋರೆಯನ್ನು ಚಕಿತರಾಗಿ ನೋಡಿಕೊಂಡರು.

---

## ಊಟಕ್ಕಿಲ್ಲದ ಉಪ್ಪಿನಕಾಯಿ

ಇತ್ತ ಸುಂದರ ಶಯ್ಯಾಗಾರದಲ್ಲಿ ರಾಜಪುತ್ರನೂ ರುಕ್ಮಿಣಿಯೂ ಅರವಿಂದನೂ ಕಥಾಕೌತುಕದಲ್ಲಿ ಮೈಮರೆತಿರಲು ಇತ್ತ ಕೋನಪ್ಪನು ದುಃಖಾತಿರೇಕದಿಂದ ಕಳವಳಗೊಂಡು ಮನೆಗೆ ಹಿಂದಿರುಗಿದನು.

ಕೋನಪ್ಪನು ಹಿಂದಿರುಗಿದನು—ಹತಾಶನಾಗಿ ಹಿಂದಿರುಗಿದನು. ತಾನು ಹಿಂದಿರುಗುವ ಪೂರ್ವದಲ್ಲಿ ಸಾಧ್ಯವಿದ್ದುದನ್ನೆಲ್ಲ ಮಾಡಿಯೇ ಮಾಡಿದನು. ಬಂದ ದಾರಿಗೆ ಸುಂಕವಿಲ್ಲೆಂಬಂತಾಯಿತು. ತಾನು ಬಹುವಿಧದಿಂದ ಬೇಡಿಕೊಂಡು ಬರೆದ ಪತ್ರಕ್ಕೆ ಪ್ರತ್ಯುತ್ತರವು ದೊರೆತಿದ್ದರೂ ಅವನಿಗೆ ಸಾಕಾಗಿತ್ತು. ರಾಜಪುತ್ರರು ಅಷ್ಟನ್ನು ಸಹ ದಯಪಾಲಿಸಲಿಲ್ಲ ಮಧ್ಯಾಹ್ನ ಮೂರು ಗಂಟೆಯ ಒಳಗಾಗಿ ಹಣವನ್ನು ಸಲ್ಲಿಸದಿದ್ದರೆ ಶೇಷಯ್ಯಶೆಟ್ಟರಿಂದ ಸೆರೆವಾಸವು ದೊರೆಯುತ್ತಿತ್ತು. ಇದು ಕೋನಪ್ಪನಂಥವರಿಗೆ ಸಹಿಸಲಸಾಧ್ಯ. ಕೊಡತಕ್ಕ ಹಣವನ್ನು ರಾಜಪುತ್ರರು ಕೊಟ್ಟಿರಲಿಲ್ಲ. ಈ ದಿನ ಅದನ್ನವರು ಕೊಡುವುದರಲ್ಲಿ ಕೋನಪ್ಪನಿಗೆ ಅಷ್ಟು ಸಂಶಯವಿಲ್ಲದಿದ್ದರೂ ಅವರ ಆಶ್ವಾಸನವು ಅವಶ್ಯವೆನಿಸಿತು. ಒಂದು ವೇಳೆ ಕೊಡದಿದ್ದರೆ?-

ಭಯಾನಕ ಭವಿಷ್ಯ !! ಇದಕ್ಕೆಲ್ಲಾ ತಾನೇ ಕಾರಣನೆಂದು ಅವನ ಭಾವನೆಯಾಯಿತು. ಏಕೆಂದರೆ ಇಂದ್ರಭವನಕ್ಕೆ ಅವನು ಆ ದಿನ ವೇಳೆಗೆ ಸರಿಯಾಗಿ ಹೋಗಲಾಗಲಿಲ್ಲ. ರಾಜಪುತ್ರರು ಭ್ರಾಮಕ ಭಾಷೆಯಿಂದ ಒಂದು ತಾಸು ಹೊಗಳಿ ಅಲ್ಲಿಂದ ಪಲಾಯನಸಂಕಲ್ಪವನ್ನು ಹರಿಸ ಬೇಕಾಗಿ ಬಂದುದನ್ನು ಅವನರಿತನು. ತಾನು ಈಗ ಹದಿನೆಂಟು ವರುಷಗಳಿಂದಲೂ ಪಡಬಾರದ ಕಷ್ಟವನ್ನು ಪಟ್ಟು ಗಳಿಸಿದ ಧನವನ್ನು ಭಾವೀ ಮಹಾರಾಜರಿಗೆ ಕೊಟ್ಟು ಬಿಟ್ಟಿದ್ದನು. ಈಗ ಅವನಲ್ಲಿ ಕವಡಿ ಸಹ ಇರಲಿಲ್ಲ. ಬಾಗಿಲು ಕಾಯುವವರ ಕಾಲನ್ನು ಇಂತಹ ವರ್ತಕಶ್ರೇಷ್ಠನು ಕಟ್ಟಿದುದಕ್ಕೆ ಬೈಗುಳೇ ಬಹುಮಾನವಾಗಿ ಬಂದುವು.

ಅವನು ಮನೆಗೆ ಬಂದಾಗ ಮಧ್ಯರಾತ್ರಿಯಾಗಿತ್ತು. ಕಿಟಿಕಿಯಿಂದ ದೀಪದ ಕಿರಣಗಳು ಹೊರನುಗ್ಗಿ ಬಂದು ಕಾತರ ಹೃದಯಗಳು ದಾರಿ ಕಾಯುತ್ತಿರುವುದನ್ನು ಸೂಚಿಸುವುವು. ಪತ್ನೀಪುತ್ರಿಯರಿಗೆ ತಿಳಿಯದ ಗುಟ್ಟಾವುದೂ ಇರಲಿಲ್ಲ. ಅವರಿಗೆಲ್ಲವೂ ತಿಳಿದಿದ್ದಿತು—ಇನ್ನೂ ಕೆಡಕು ವರ್ತಮಾನವನ್ನರಿಯಲು ಅವರು ಬೆದರಿ ಕಾದಿದ್ದರು. ಕೋನಪ್ಪನು ಒಂದೆರಡು ನಿಮಿಷಗಳ ವರೆಗೂ ಬಾಗಿಲನ್ನು ಬಡಿಯದೆ ಮೌನವಾಗಿ ನಿಂತಿದ್ದನು. ಆಶಾಯುಕ್ತರಾದ ರಮಣಿಯರಿಬ್ಬರನ್ನು ನಿರಾಶೆಯೆಂಬ ಸಿಡಿಲಿನಿಂದೆಚ್ಚರಿಸುವುದೆಂತು !

ಅಂತೂ ಕೋನಪ್ಪನು ಬಾಗಿಲನ್ನು ಬಡಿದನು. ಒಳಗಿನ ದೀಪವು ಚಲಿಸಿದಂತಾಗಿ ನಿರಿಯ ಚೆಲ್ಲಾಟವೂ ಬಳೆಗಳ ನಾದವೂ ಕೇಳಿಸಿದುವು. ಬಾಗಿಲು ತೆರೆಯಲ್ಪಟ್ಟಿತು.

ಪ್ರೇಮಾತಿರೇಕದಿಂದ ಯಾರಿಗಾಗಿ ತಾನು ಪ್ರಾಣವನ್ನು ಸಹ ತೊರೆಯಲು ಸಿದ್ಧನಾಗಿದ್ದನೋ ಆ ಪ್ರಮದೆಯರು ಕಾಣಿಸಿಕೊಂಡರು. ದೀಪದ ಬೆಳಕು ಇವನ ಮೋರೆಯ ಮೇಲೆ ಬಿತ್ತು. ಕೂಡಲೆ ಅವರು ಅರಿಯಬಾರದ ಸಂದೇಶ ವನ್ನರಿತು ಎದೆಯೊಡೆದರು.

ಕೋನಪ್ಪನೆಲ್ಲವನ್ನೂ ವಿವರಿಸಿ ಕಣ್ಣೀರಿಟ್ಟನು. ಹೆಂಗಳೆ ಯರೇ ಧೈರ್ಯವನ್ನು ತಂದುಕೊಂಡು ಮಾತನಾಡಿದರು. "ಅಯ್ಯೋ, ಪ್ರಿಯಾ, ಇಲ್ಲಿ ನೋಡು ! ನೀನು ಭಾವಿಸಿ ರುವಷ್ಟು ಭಯಾನಕವು ಸಂಭವಿಸಲಿಕ್ಕಿಲ್ಲ. ರಾಜಪುತ್ರರು ರಾಜಪುತ್ರರಲ್ಲವೇ ? ಮಧ್ಯಾಹ್ನದೊಳಗಾಗಿ ಹಣವು ಬಂದೇ ಬರುವುದು."

ಮುಗುಳ್ನಗೆಯನ್ನು ಬೀರಲು ಯತ್ನಿಸುತ್ತಾ ಮಗಳಿಂ ದಳು "ಅಪ್ಪಾ, ನಾನಿದ್ದೇನೆ ಹೆದರಬೇಡ! ತಕ್ಕಷ್ಟು ವಿದ್ಯೆ ಯನ್ನು ನೀನು ನನಗೆ ಕಲಿಸಿಲ್ಲವೇ ? ನಾನು ಎಲ್ಲರ ಸುಖ ಜೀವನಕ್ಕೆ ಜವಾಬುದಾರಳು."

ಈ ಮಾತುಗಳನ್ನು ಕೇಳಿ ಅವನ ದುಃಖವು ದ್ವಿಗುಣಿತ ವಾಯಿತು. ಇಬ್ಬರನ್ನೂ ಒಂದೇ ತೆಕ್ಕೆಯಲ್ಲಿ ತಬ್ಬಿಕೊಂಡು ಗೋಳಿಟ್ಟನು. ನಂತರ ತಾನು ಹೋದ ಕಾರ್ಯವು ಕೈಗೂಡ ದಿದ್ದ ಸಂಗತಿಯನ್ನು ವಿವರಿಸಿದನು. "ಶೇಷಯ್ಯ ಶೆಟ್ಟರು ಇನ್ನೂ ಸ್ವಲ್ಪ ಅವಧಿಯನ್ನು ಕೊಡಲಾರರೇ" ಎಂದ ವನ ಹೆಂಡತಿಯು ಕೇಳಲು "ಇಲ್ಲ. ಒಂದು ತಾಸಲ್ಲ, ಒಂದು ನಿಮಿಷವನ್ನೂ ಕೊಡುವುದಿಲ್ಲ" ಎಂದು ಅವನು ಹೇಳಿದನು.

೧೪ ವರ್ಷಗಳ ವರೆಗೆ ತನ್ನೊಡನೆ ನೊಂದ ಮಡದಿ; ೧೬

ವರ್ಷದ ಸುಂದರಳಾದ ಮಗಳು!! ಇವರನ್ನೇ ನೋಡುತ್ತಾ ಇವರ ಭವಿಷ್ಯವನ್ನೇ ನೆನೆಯುತ್ತಾ ಕೋನಪ್ಪನು ಕೆಲಕಾಲ ನಿದ್ರಾವಶನಾಗಿದ್ದಂತೆ ತೋರಿತು.

ಮರುದಿನ ಬೆಳಗಾಯಿತು; ಕ್ರಮೇಣ ಹೊತ್ತೇರಿತು. ಎಲ್ಲರೂ ಕಂಗೆಟ್ಟು ಕುಳಿತಿದ್ದರು. ಮನೆಗಾರೂ ಬರಲಿಲ್ಲ. ಅವನನ್ನು ಮನೆಯಿಂದ ಹೊರಗೆ ಹೋಗಲು ರಮಣಿಯು ರಿಬ್ಬರೂ ಬಿಡಲಿಲ್ಲ. "ನಾನು ಹೋದರೂ ಫಲವಿಲ್ಲ" ಎಂದು ಕೋನಪ್ಪನು ನುಡಿದನು. ಮಧ್ಯಾಹ್ನವೂ ಮೀರಿತು. ಮೂರು ಗಂಟೆಯೂ ಸಮೀಪಿಸಿತು. ಕೋನಪ್ಪನೂ ರಮಣಿ ಯರೂ ಕಡುನಡುಗಿ ಕಂಗೆಟ್ಟರು.

ಕೋನಪ್ಪನು ಹುಚ್ಚನಂತೆ ದಿಕ್ಕುದೋರದೆ ಅಡ್ಡಾಡು ತ್ತಿದ್ದನು. ಗಡಿಯಾರದಲ್ಲಿ ಮೂರು ಬಾರಿಸಿತು. ರಮಣಿ ಯರು ಅತ್ತ ಇವನ ಹೆಜ್ಜೆಯ ಸಪ್ಪಳವನ್ನೇ ತದೇಕಚಿತ್ತ ರಾಗಿ ಕೇಳುತ್ತಿದ್ದರು. ಅದೊಮ್ಮೆ ನಿಂತೊಡನೆ ಭಯ ವಿಹ್ವಲರಾಗಿ ಎದ್ದು ಓಡಿಹೋಗಿ ನೋಡಿಬರುವರು. ಪರ ಸ್ಪರರಲ್ಲಿ ಮಾತನಾಡುವಷ್ಟು ಶಾಂತತೆಯು ಯಾರಲ್ಲಿಯೂ ಉಳಿದಿರಲಿಲ್ಲ.

ಮೂರು ಹೊಡೆದ ಕೆಲ ಕ್ಷಣಗಳ ನಂತರ ಮಹಡಿಯನ್ನೇ ರಿದ ಸಪ್ಪಳವಾಯಿತು. ಅಲ್ಲಿ ಸಿಡಿಮದ್ದನ್ನಿಟ್ಟುದು ಅವನ ಹೆಂಡತಿಗೆ ಗೊತ್ತಿತ್ತು. ಇನ್ನೆಂತು ಅವಳು ತಡೆದಾಳು? ಒಮ್ಮೆಲೆ ಅಲ್ಲಿಗೆ ಹಾರಿಹೋದಳು. ಅಂತಃಕರಣವು ಅತಿ ಕರಗಿದ ಮಗಳೂ ಸಹ ಮೈಮೇಲೆ ಸ್ಮೃತಿಯಿಲ್ಲದೆ ಹಿಂಬಾ ಲಿಸಿ ನುಗ್ಗಿದಳು. ಇಷ್ಟರಲ್ಲಿ ಸಿಡಿಮದ್ದಿನ ಸಿಡಿಲ್ನುಡಿಯ ಅರ್ಭಾಟವು ಪ್ರತಿಧ್ವನಿಸಿತು. ಇವರಿಬ್ಬರ ಬಾಯಿಯಿಂದಲೂ

ಚೀತ್ಕಾರವು ಹೊರನುಗ್ಗಿ ಬಂದಿತು.

ಅದೆಂಥಾ ಭಯಾನಕ ನೋಟವದು! ಭಾಮೆಯರು ಅದನ್ನೆಂತು ಸಹಿಸಬಲ್ಲರು!! ಜೀವದ ಜೀವವಾಗಿದ್ದ ಅವನೇ ಇಲ್ಲದಂತಾಗಿದ್ದನು. ಹೊಗೆಯು ಚಾವಣಿಯನ್ನು ಸೇರಿತ್ತು. ಮದ್ದಿನ ವಾಸನೆಯು ಗಾಳಿಯಲ್ಲಿ ತುಂಬಿತ್ತು. ಎದೆಯು ಝಲ್ಲೆನ್ನುವಂತೆ ತಲೆಯೊಂದು ತುಂಡುತುಂಡಾಗಿ ಮಿದುಳಿನೊಡನೆ ಸಿಡಿಸಿಡಿದು ಬಿದ್ದುಬಿಟ್ಟಿತ್ತು!!

"ಅಯ್ಯಯ್ಯೋ" ಎಂದು ಎದೆಯೊಡೆದು ಚೀರಿ ಮಗಳು ಹೆಣದ ಬದಿಯಲ್ಲಿ ಧೊಪ್ಪನೆ ಕುಕ್ಕರಿಸಿದಳು. ಆದರೆ ಅವಳ ತಾಯಿಯ ಮೇಲಾದ ಪರಿಣಾಮವು ಬೇರೊಂದು ಪರಿಯಾಗಿತ್ತು, ಕೆಲವು ಕಾಲ - ಒಂದೇ ಅರಕ್ಷಣಕಾಲ - ಅವಳು ಆ ಕೋಣೆಯ ಹೊಸ್ತಿಲ ಮೇಲೆ ಸ್ತಬ್ಧಳಾಗಿ ನಿಂತುಬಿಟ್ಟಳು. ಭಯಂಕರವಾದ ಆ ದೃಶ್ಯದಲ್ಲಿ ಕಣ್ಣುಗಳು ನೆಟ್ಟುಹೋಗಿದ್ದುವು. ನಂತರ ಒಮ್ಮಿಂದೊಮ್ಮೆ ಅತ್ಯಂತ ಹೃದಯವೇದನೆಯನ್ನು ಅನುಭವಿಸಲಾರದೆ ಚೀತ್ಕಾರವು ಹೊರಹೊಮ್ಮಿತು.— ಹೃದಯವು ಒಡೆದುಹೋಯಿತು. ಅವಳು ಗತಪ್ರಾಣಳಾಗಿ ನೆಲಕ್ಕುರುಳಿಬಿಟ್ಟಳು.

ಇಷ್ಟರಲ್ಲಿ ಮನೆಯಾಳುಗಳು ಓಡಿಬಂದು ಮೈಮೇಲೆ ಅರಿವಿಲ್ಲದ ವನಮಾಲಿಯನ್ನು ಶಯ್ಯಾಗಾರಕ್ಕೊಯ್ದು ಮಲಗಿಸಿಬಿಟ್ಟರು.

ಅವಳಿಗೆ ಶೈತ್ಯೋಪಚಾರವನ್ನು ಮಾಡುವುದಕ್ಕೆ ಅವಕಾಶಕೊಡದೆ ಅದಾರೋ ಬಿಟ್ಟೂಬಿಡದೆ ಬಾಗಿಲನ್ನು ಬಡಿಯುತ್ತಿದ್ದರು. ಸೇವಕನೊಬ್ಬನು ಬಾಗಿಲನ್ನು ತೆರೆದನು. ಅರವಿಂದನು ಬಂದನು. ರಘುನಾಥನು ಹಣವನ್ನು ಸಲ್ಲಿಸ

ಲೆಂದು ಅವನನ್ನೀಗ ಕಳಿಸಿಕೊಟ್ಟಿದ್ದನು.

ರುಕ್ಮಿಣಿಯು ತಾನು ಉಸುರಿದಂತೆ ಆ ದಿಲ್ಲಿಯ ಧನಿಕನನ್ನು ಆ ದಿನ ಮಧ್ಯಾಹ್ನ ಸುಮಾರು ಒಂದು ಗಂಟೆಗೆ ರಾಜಪುತ್ರನಲ್ಲಿಗೆ ಕರೆದೊಯ್ದಳು. ಕಾಗದಕ್ಕೆ ಸಹಿಯಾದುದೂ ಹಣವನ್ನೆಣಿಸಿದುದೂ ಕಾಲು ಗಂಟೆಯಲ್ಲಿ ಮುಗಿದುವು. ಅರವಿಂದನು ಕೋನಪ್ಪನ ಕಾರ್ಯದ ಮಹತ್ವವನ್ನೆತ್ತಿ ಹೇಳಿದರೂ ಆ ಸದ್ಗೃಹಸ್ಥನ ನಡತೆಗೆ ಮನಸೋತ ರಾಜಪುತ್ರನು ಫಲಾಹಾರವು ಮುಗಿಯುವವರೆಗೂ ತಡೆಯಲೇಬೇಕೆಂದನು. "ತುಚ್ಛವರ್ತಕರಿಗೆಲ್ಲಾ ಏನು ಅಂತಹ ಅವಸರ!! ತಾಸು ಹೆಚ್ಚು ತಾಸು ಕಡಿಮೆ. ಅದೇನು ರಾಜಕಾರ್ಯವೇ? ಹೇಳಿದಷ್ಟು ಕೇಳು" ಎಂದವನು ನುಡಿದೊಡನೆಯೇ ನಿರ್ವಾಹವಿಲ್ಲದೆ ಅರವಿಂದನು ನಿಂತನು. ನಂತರ ಬಹು ವೇಗವಾದ ಕುದುರೆಯನ್ನೇರಿ ಊರಿನಲ್ಲಿ ಕೋನಪ್ಪನು ಬಂದಿಲ್ಲವೆಂಬುದನ್ನು ನಿರ್ಧರಿಸಿಕೊಳ್ಳುತ್ತಾ ಅರವಿಂದನು ಅತ್ಯವಸರದಿಂದ ಇಲ್ಲಿಗೆ ಬಂದುಬಿಟ್ಟನು. ಇಲ್ಲಿಯ ವಿಷಾದವಿಷಯವು ಅವನನ್ನೂ ಕಳವಳಗೊಳಿಸಿತು. ವನಮಾಲಿಯಂಥವಳು ಅನಾಥಳಾದುದು ಅನ್ಯಾಯವೆಂದು ಮರುಮರುಗಿದನು.

ಅಂತೂ ಅವನೂ ಹೋಗಿನೋಡಿದನು—ಬಹಳ ಅನರ್ಥವಾಗಿತ್ತು. ಸಹೃದಯನಾದ ಅವನಿಗೆ ಇದರಿಂದ ಒಂದು ತರದ ಭೀತಿಯುಂಟಾಯಿತಲ್ಲದೆ ಪರದೇಶಿಯಾದ ವನಮಾಲಿಯ ವಿಷಯದಲ್ಲಿ ಕರುಣೆಯುಂಟಾಯಿತು. ಇವೆಲ್ಲವನ್ನು ಆಗ ತಾನೇ ಚೇತರಿಸಿಕೊಂಡಿದ್ದ ವನಮಾಲಿಯು ಕೇಳಿ, ಅರವಿಂದನನ್ನು ಬರಮಾಡಿಕೊಂಡಳು.

ದುಃಖಸಂತಪ್ತಳಾಗಿ ತಲೆ ತಗ್ಗಿಸಿ ಕುಳಿತಿದ್ದರೂ ಚೆಲ್ವಿ

ಕೆಯ ಚಂದ್ರಿಕೆಯನ್ನು ಬೀರುತ್ತಿದ್ದ ಅವಳ ಅಂಗ ಸೌಂದರ್ಯವನ್ನು ಕಂಡು ಅರವಿಂದನು ಚಕಿತನಾದನು.

ಸಹಾನುಭೂತಿಯಿಂದ ಅವನು ನುಡಿನುಡಿದಂತೆ ವನ ಮಾಲಿಯು ಮೈಮರೆತು ಕಣ್ಣೀರನ್ನು ಸುರಿಸಲಾರಂಭಿಸಿ ದಳು. ಅವನು ತಾನು ಅಪರಿಚಿತನಾದರೂ ಬಂಧುವಿಗಿಂ ತಲೂ ಹೆಚ್ಚು ಮನಕಲಕಿದವನಾಗಿರುವೆನೆಂದನು. ತಂದೆಯ ಹೆಸರಿಗೆ ಕಳಂಕವು ಬಾರದಂತೆ ಮಾಡುವುದು ತನ್ನ ಕರ್ತವ್ಯ ವೆಂದು ಅವಳೆನ್ನಲು, ಅದರ ಅರ್ಥವನ್ನು ಗ್ರಹಿಸಿ ಅರವಿಂದನು ಶೇಷಯ್ಯ ಶೆಟ್ಟರ ಋಣದಿಂದ ಕೋನಪ್ಪನನ್ನು ಮುಕ್ತ ಮಾಡುವೆನೆಂದು ಮೇಲಕ್ಕೆದ್ದನು. ಅವಳಿಗೆ ಅಂತಹ ಸ್ಥಿತಿ ಯಲ್ಲಿಯೂ ಅತುಲಾನಂದವಾಯಿತು. ಕೋನಪ್ಪನ ಮರ ಣವು ಹೊರಬಿದ್ದರೆ ರಾಜಪುತ್ರನಾದ ರಘುರಾಯನ ಹೆಸರಿಗೆ ಕುಂದು ಬರುವುದೆಂದು ಅರವಿಂದನಿಗೀಗ ಹೊಳೆ ಯಿತು. ಆಗವನು ವನಮಾಲಿಗೆ ಕೋನಪ್ಪನ ಆತ್ಮಹತ್ಯದ ವಿಷಯವನ್ನು ಮುಚ್ಚಿಡಬೇಕೆಂದೂ ಇದರಿಂದ ಲೋಕದಲ್ಲಿ ಅವನ ಹೆಸರಿಗೆ ಕಳಂಕವುಂಟಾಗದೆಂದೂ ಹೇಳಲು ಅವಳು ತನ್ನ ನಂಬಿಗೆಯ ಸೇವಕರ ಸಹಾಯದಿಂದ ಹಾಗೆ ಮಾಡು ವುದಾಗಿಯೂ ಅರವಿಂದನು ಅಧಿಕಾರಿಗಳಿಗೆ ಲಂಚವನ್ನಿತ್ತು ಸಮಾಧಾನಪಡಿಸಬೇಕೆಂದೂ ಬೇಡಿಕೊಂಡಳು. ಅರ ವಿಂದನು ಸಮ್ಮತಿಸಿದನು.

ಗೋತ್ತಾದ ಕಾರ್ಯಗಳನ್ನೆಲ್ಲಾ ಮಾಡಿಕೊಂಡು ಅರ ವಿಂದನು ಹಿಂದಿರುಗಿ ಬಂದನು. ವನಮಾಲಿಗೆ ಆನಂದ ವಾಯಿತು. ಅವಳು ಮೇಲಿಂದ ಮೇಲೆ ಬಂದು ಯೋಗ್ಯ ಸಲಹೆಗಳನ್ನು ಕೊಡುವ ದಯಮಾಡಬೇಕೆನ್ನಲು ಅರ

ವಿಂದನು ಒಪ್ಪಿದನು. ಅವಳು ಬೇಡವೆಂದರೂ ಉಳಿದ ನೂರಾರು ರೂಪಾಯಿಗಳನ್ನು ಅವಳಿಗೆ ಕೊಟ್ಟು ಅರವಿಂದನು ರಾಜಪುತ್ರನ ಬಳಿಗೆ ನಡೆದನು.

ಅವನು ಅಲ್ಲಿಗೆ ಬಂದಾಗ ರಾತ್ರಿಯ ಹತ್ತು ಗಂಟೆಯಾಗಿ ಹೋಗಿತ್ತು. ಆದರೂ ಸಹ ಅವನಿಗೆ ರಘುನಾಥನ ದರ್ಶನ ಲಾಭವಾಗದಿರಲಿಲ್ಲ. ಇವನ ಕಪ್ಪಿಟ್ಟ ಕಳೆಗೆಟ್ಟ ಹುಚ್ಚು ಮೋರೆಯನ್ನು ನೋಡಿ "ಮಹತ್ವದ ವಿಷಯವೇನೂ ಇಲ್ಲ ವಷ್ಟೇ, ಅರವಿಂದಾ?" ಎಂದು ಪ್ರಶ್ನಿಸಲು, "ಹಣವನ್ನು ಕೊಡಹೋದಾಗ ಮುಹೂರ್ತವು ಮೀರಿಹೋಗಿತ್ತು" ಎಂದು ನಡುಗುವ ಧ್ವನಿಯಿಂದ ಉತ್ತರವು ಬಂದಿತು.

"ಏನೆನ್ನುವೆ? ಆ ದುರ್ದೈವಿಯು ಸೆರೆಯನ್ನು ಸೇರಿ ದನೋ ಹಹ್ಹಹ್ಹ!"

"ಅವನು ಸೇರಿದುದು—ಸೆರೆಯಲ್ಲ, ಪರಲೋಕವು. ಈ ಕಾರ್ಯದಿಂದ ಸಾರ್ವಭೌಮರ ಇತಿಹಾಸದಲ್ಲಿ ಕಳಂಕ ವೊಂದು ಜನಿಸಿದಂತಾಯಿತು."

ಇದನ್ನು ಕೇಳಿ ರಘುನಾಥನಿಗೆ ಮಿತಿಮೀರಿದ ಕೋಪ ವುಂಟಾಯಿತು. ಅವನು ಕಾಲುಗಳನ್ನಪ್ಪಳಿಸಿ "ಹೇಳು, ಅದೇನು ಬೊಗಳು" ಎಂದು ಗದ್ದರಿಸಿದನು.

"ನನ್ನ ಅಭಿಪ್ರಾಯವು, ಕೋನಪ್ಪನ ತಲೆಯು ಸಿಡಿ ಮದ್ದಿನಿಂದ ಚೂರುಚೂರಾಗಿ ಸಿಡಿದುಬಿದ್ದಿದೆ; ಅವನ ಧರ್ಮ ಪತ್ನಿಯು ಎದೆಯೊಡೆದು ಪ್ರಾಣವನ್ನು ಬಿಟ್ಟಿದ್ದಾಳೆ ಎಂದು."

"ದೇವರೇ ಗತಿ! ಇದು ದುರ್ಲಕ್ಷಣ. ಇನ್ನು ಎಲ್ಲವೂ ಬಯಲಾಗುವುದು."

"ನಾನೆಲ್ಲವನ್ನೂ ನಿಲ್ಲಿಸಿರುವೆನು. ಅವನ ಮಗಳಾದ ವನಮಾಲಿಯು ನೆರೆಹೊರೆಯರರಿಯದಂತೆ ಎಲ್ಲವನ್ನೂ ಗುಟ್ಟಾಗಿಟ್ಟಿರುವಳು. ಸರಕಾರಕ್ಕೆ ತಿಳಿಯದಂತೆ ವಿಪರೀತವಾಗಿ ಲಂಚವನ್ನು ಸುರುವಿ ಆ ಅಧ್ಯಾಯವನ್ನು ಅಲ್ಲಿಗೇ ನಿಲ್ಲಿಸಿರುವೆನು."

"ಅರವಿಂದಾ, ಬಹು ಉಪಕಾರವಾಯಿತು. ಸಾವುಕಾರರಿಗೇನೂ ಕೊಟ್ಟು ಬಂದಿಲ್ಲವಷ್ಟೇ ?ಹೌದು—ಆ ನೀಚವರ್ತಕನು ಇಹಲೋಕವನ್ನು ತೊರೆದುದು ಒಂದು ವಿಧದಲ್ಲಿ ಒಳ್ಳೆಯದೇ ಆಯಿತು. ಮೂವತ್ತುಸಾವಿರವುಳಿಯಿತು !! ಎಲೋ, ನೀನೂ ಬೇಕಾದರೆ ಒಂದೆರಡು ಸಾವಿರ ತೆಗೆದುಕೋ."

"ನೀವು ಬಹುವೇಗವಾಗಿ ನುಡಿಯುತ್ತಿರುವಿರಿ. ಸಾವುಕಾರರಿಗೆ ಕೊಡದಿದ್ದರೆ ಹೇಗೆ? ನೀವು ಕೋನಪ್ಪನಿಗೆ ಕೊಡತಕ್ಕುದು ಶೀಪಯ್ಯಶೆಟ್ಟರಿಗೆ ಗೊತ್ತಿರಲಿಲ್ಲವೋ? ಅವರಿಗೆ ಗೊತ್ತಿತ್ತು. ಕೋನಪ್ಪನ ಮರಣದ ವಿಷಯವನ್ನು ಸಾಲವನ್ನು ತೀರಿಸದೆ ಮುಚ್ಚಿಡಲು ಸಾಧ್ಯವಿತ್ತೋ? ಇಲ್ಲ. ಸರಕಾರದ ನವಕರರಿಗೆ ಲಂಚವು ಕೊಡಲ್ಪಟ್ಟಿತು."

"ಈಗ ನಾನು ವ್ಯರ್ಥವಾಗಿ ಹೊತ್ತುಗಳೆಯಲಾರೆ. ನಿನ್ನ ಲೆಕ್ಕವು ನನಗೆ ಬೇಡ. ಮಾಡಿದ್ದೆಲ್ಲಾ ಒಳಿತೇ ಆಯಿತು. ಈಗ ೧೦-೧೨ ಶ್ರೇಷ್ಠ ವ್ಯಕ್ತಿಗಳು ಅಲ್ಲಿಗೆ ದಯಮಾಡಿದ್ದಾರೆ. ನೀನೂ ಬಂದು ಸುಖೋಪಭೋಗದಲ್ಲೊಂದು ಭಾಗವನ್ನು ತೆಗೆದುಕೋ."

"ಮಹಾಸ್ವಾಮಿ, ಕ್ಷಮಿಸಿ. ನನಗೆ ಇನ್ನಿತರ ಯೋಚನೆಗಳಿವೆ. ಹೋಗಿಬರುತ್ತೇನೆ."

"ಹಾ, ಗೊತ್ತಾಯಿತು. ಏನೋ ಪ್ರಣಯ ಸಾಹಸದಲ್ಲಿ

ರುವೆ, ಅಲ್ಲವೆ? ಹಾಗಾದರೆ ತಡೆಯುವುದಿಲ್ಲ. ನಿನಗೆ ಜಯವಾಗಲಿ, ನಾಳೆ ಮಾತನಾಡೋಣ."

ರಘುನಾಥನು ತನ್ನ ಅರಮನೆಯ ಮುಖ್ಯವಾದ ಭಾಗವನ್ನು ಸೇರಿದನು. ಅಲ್ಲಿ ಹಗಲು ರಾತ್ರಿಯಾಗಿಯೂ ರಾತ್ರಿಯು ಹಗಲಾಗಿಯೂ ಮಾರ್ಪಡಿಸಲ್ಪಟ್ಟಿತ್ತು. ಬೆಳಗಿನ ವರೆಗೂ ಅವನು ಸ್ವೈಪರಿತು ಉಡಿಗೆ, ತೊಡಿಗೆ, ತಿನಿಸು, ಉಣಿಸು, ಕುಣಿತ ಮೊದಲಾದುವುಗಳಲ್ಲಿ ನಲಿದಾಡಿದನು.

ಇತ್ತ ವನಮಾಲಿಯು ದೈನ್ಯಮುಖವನ್ನು ನೆನೆಯುತ್ತಾ ಅರವಿಂದನು ಮನೆಗೆ ಬಂದು ವಿಶ್ರಮಿಸಿಕೊಂಡನು. ಅವನು ರಾಜಪುತ್ರನ ಮುಂದೆ ಒಮ್ಮೆಯಾದರೂ ಅವಳ ಸಂಬಂಧವಾದ ಮಾತನ್ನೆತ್ತಲೇ ಇಲ್ಲವೆಂಬುದನ್ನು ನಮ್ಮ ಚತುರ ವಾಚಕರು ಅರಿತಿರುವರು.

---

## ಗುಟ್ಟುಗಳು ರಟ್ಟಾದುವು

"ಹಾಗಾದರೆ ಸುಂದರೀ ಅವನಿಗೆ, ಪಶ್ಚಾತ್ತಾಪವಾಯಿತೆನ್ನುವೆಯಾ?"

"ಇದರಲ್ಲಿ ನನಗೇನೂ ಸಂಶಯವಿಲ್ಲ. ಅವನು ಒಳ್ಳೆಯ ಭ್ರಾತೃವೂ ಅಲ್ಲ, ಹೇಳಿಕೊಳ್ಳುವಂಥ ತಂದೆಯೂ ಅಲ್ಲ. ಅವನ ಕೊನೆಯ ಕಾಲದಲ್ಲಿ ತಾನು ತನ್ನ ಭಗಿನಿಯೊಡನೆ ಎಂತು ನಡೆದುಕೊಂಡೆನೆಂಬುದೂ ನನ್ನನ್ನೆಂತು ಸಾಕಿ ಸಲಹಿದೆನೆಂಬುದೂ ಅವನ ಸ್ಮೃತಿಪಥದಲ್ಲಿ ಬರಲು ಅವನ ಹೃದಯವು ವಿಪರೀತವಾಗಿ ಕಲಕಿರಬಹುದು. ತಾಯಿಯು ತೀರಿಕೊಂಡಾಗ ನಾನಿನ್ನೂ ಚಿಕ್ಕವಳು; ತಂದೆಯು ನನ್ನನ್ನು ಬಹು ದುರ್ಲಕ್ಷಿಸಿದನು. ನಾನು ಓಡಾಡುವುದನ್ನು ಕಲಿತ

ಮೇಲೆ ಸೂರ್ಯೋದಯದಿಂದ ಸೂರ್ಯಾಸ್ತದ ವರೆಗೂ ಕೊಳಕು ಕಾಲುವೆಯಲ್ಲಿಯೇ ಕಾಲವನ್ನು ಕಳೆಯುತ್ತಿದ್ದೆನು. ಅನಾಥಬಾಲಿಕಾಶ್ರಮವೊಂದರಲ್ಲಿ ಸ್ವಲ್ಪ ಶಿಕ್ಷಣವು ದೊರೆಯಿತು. "ಶರಣನ ಗುಣ ಮರಣದಲ್ಲಿ ನೋಡು" ಎಂದು ಗಾದೆ. ಅವನು ಅವಸಾನಸಮಯದಲ್ಲಿ ಕ್ಷಮಿಸು ಕ್ಷಮಿಸೆಂದು ಮೊರೆಯಿಡಲಿಲ್ಲವೇ? ಇದರಿಂದ ಧ್ವನಿತವಾಗುವುದೇನು?"

"ಅದಿರಲಿ, ಪ್ರಿಯೆ, ಇಷ್ಟು ಅಲ್ಪ ಶಿಕ್ಷಣದಿಂದಲೇ ನೀನು ನುಡಿಜಾಣೆಯಾದುದೆಂತು? ಈ ವೀರಪ್ಪನು ಸಾಧಾರಣವಾಗಿ ಏನನ್ನೂ ಮೆಚ್ಚನು."

"ನನಗೆ ಓದುವ ಹುಚ್ಚು. ನನ್ನ ತಂದೆಯು ವಿದ್ವಾಂಸನಾದುದರಿಂದ ಅವನಿಂದ ಕೆಲವು ವಿಷಯಗಳನ್ನರಿಯುವುದು ನನಗೆ ಕಷ್ಟವೆನಿಸಲಿಲ್ಲ. ಇತ್ತೀಚಿಗೆ—ಅವನು ಪರಲೋಕವಾಸಿಯಾದ ಆ ಮನೆಯಲ್ಲಿರಲಾರಂಭಿಸಿದ ಮೇಲೆ—ನನ್ನನ್ನು ಯಾವಾಗಲೂ ಸಮೀಪದಲ್ಲಿಯೇ ಇರಹೇಳುತ್ತಿದ್ದನು. ಒಬ್ಬೊಂಟಿಗನಾಗಿರುವುದು ಅವನಿಗೆ ಸರಿಬೀಳುತ್ತಿರಲಿಲ್ಲ."

"ಅವನ ಜೀವನವು ರಹಸ್ಯಮಯವಾದುದೊ? ಸುಂದರಳಾದ ಸುಂದರೀ, ಈ ಪುಟ್ಟ ಪುಸ್ತಕವನ್ನು ನೀನು ನೋಡಿರುವೆಯಲ್ಲವೇ?"

"ಪ್ರಿಯ, ನಿಮ್ಮಿಂದ ವಿಷಯಗಳನ್ನು ಬಚ್ಚಿಡುವುದು ಇನ್ನು ವಿಹಿತವಲ್ಲ. ಏಕೆಂದರೆ ನಾವಿನ್ನು ಅಭಿನ್ನರು. ನಮ್ಮ ತಂದೆಯ ಹಾಗೂ ಈ ಪುಸ್ತಕದಲ್ಲಿಯ ಕೆಲವು ಕಾಗದಗಳ ಸಂಬಂಧವಾದ ಕೆಲವು ಕೌತುಕದ ಸಂಗತಿಗಳನ್ನು ಸ್ವಲ್ಪದ

ರಲ್ಲಿ ಹೇಳುವೆನು."

"ನನಗೆ ಬೇಕಾದುದೂ ಅದೇ! ಇದರಿಂದ ನಮ್ಮಿಬ್ಬರಿಗೂ ಬಹು ಲಾಭವಾಗುವುದು. ಈ ಕಾಗದಗಳು ಬಹು ದ್ರವ್ಯಲಾಭವನ್ನುಂಟುಮಾಡಿಕೊಡಬಹುದು. ನಿನ್ನಂಥವಳು ನನ್ನವಳಾದುದು ನನ್ನ ಪುಣ್ಯ."

"ಹಾಗಾದರೆ ನನಗಾನಂದವಾಯಿತು! ನಮ್ಮ ತಂದೆಯು ರಸಾಯನ ಶಾಸ್ತ್ರದಲ್ಲಿ ಇನ್ನಿತರ ವಿದ್ಯೆಗಳಿಗಿಂತಲೂ ಹೆಚ್ಚು ಪ್ರವೀಣನಾಗಿದ್ದನು. ಆ ವಿದ್ಯೆಯ ರಹಸ್ಯವನ್ನರಿತ ಅವನಿಗೆ ಕ್ರೂರತರ ವಿಷವನ್ನು ಸೃಜಿಸುವುದು ಗೊತ್ತಿತ್ತು. ಓ, ನಮ್ಮಪ್ಪನು ಬಹು ಭಯಂಕರನು!!"

"ಭಯಂಕರನೇ!! ಹೇಳು, ಹೇಳು. ಅವನ ಅಪರಾಧಗಳಿಗೆ ನೀನು ಹೊಣೆಯಲ್ಲ, ಹೆದರದಿರು."

"ಅಹುದು, ನಾನು ಹೊಣೆಯಲ್ಲ. ನಾನೇನೂ ಸದ್ಗುಣಿಶ್ರೇಷ್ಠಳಲ್ಲವೆಂಬುದು ನಿಜ. ಆದರೂ ಅವನು—ಅಯ್ಯೋ! ಅವನು—ತಂದೆಯು—ಎಂತಹ ಕೃತ್ಯಗಳನ್ನು ಮಾಡಿದನು ಹೇಳಲಾರೆ-ಹೇಳುವುದಿಲ್ಲ, ಇಲ್ಲ-ಇಲ್ಲ-ಎಂದಿಗೂ-ಇಲ್ಲ!!!"

"ಚೆಲುವೇ, ಅಪ್ರತಿಭಳಾಗಬೇಡ. ವಿಷಯವನ್ನರಿಯಲು ಕೌತುಕಾತಿರೇಕದಿಂದ ಕಂಗೆಟ್ಟಿದ್ದೇನೆ. ನಿನ್ನನ್ನು ಬೇಡುತ್ತೇನೆ, ವಾಗ್ಝಾಲದ ಜಲಪಾತವಾಗಲಿ."

"ನಿಮ್ಮ ಮಾತನ್ನು ಮೀರುವುದಿಲ್ಲ; ಶಾಂತಳಾಗಿ ನುಡಿಯುತ್ತೇನೆ. ಅವನು ವಿಷವಿದ್ಯಾವಾಚಸ್ಪತಿಯೆಂಬೆನಷ್ಟೆ ಇಷ್ಟೇ ಅಲ್ಲ. ವಿಜಯನಗರದ ಸೂಲಗಿತ್ತಿಯರೆಲ್ಲರೂ ಇವನನ್ನೇ ನಂಬಿದ್ದರು. ಏಕೆಂದರೆ ಏನೂ ಶ್ರಮವಿಲ್ಲದೆ ಹಲಿವುಳಿಯುವಂತಹುದೊಂದು ಅಮೋಘವಾದ ಔಷಧಿಯನ್ನು

ಇವನು ಕಂಡುಕೊಂಡಿದ್ದನು."

"ದೇವರೇ ಗತಿ! ಇದೆಷ್ಟು ಭಯಾನಕ!!!"

"ನಾನದನ್ನು ಹೇಳಲಿಲ್ಲವೆ? ಲೀಲಾವತಿಯೆಂಬೊಬ್ಬಳು ಅವನ ಬಹುದೊಡ್ಡ ಗಿರಾಕಿಯು. ಅವನು ಕೊಟ್ಟ ವಿಷವೊಂದರ ತೊಟ್ಟನ್ನು ಮಗುವಿನ ನಾಲಿಗೆಯ ಮೇಲಿಟ್ಟೊಡನೆಯೇ ಅದು ಪರಲೋಕಕ್ಕೆ ತೆರಳುತ್ತಿತ್ತು; ನೋಡುವವರಿಗೆ ಮಾತ್ರ ಅದು ಸಾದಾ ಸೆಟೆಬೇನೆಯಿಂದ ಸತ್ತಿರುವಂತೆ ಭಾಸವಾಗುತ್ತಿತ್ತು. ಸೂಲಗಿತ್ತಿಯರಿಗೆ ಇದೂ ಮೇಲಿಂದ ಮೇಲೆ ಬೇಕಾಗುತ್ತಿತ್ತು."

"ನಾನು ಕನಸಿನಲ್ಲಿ ಸಹ ಕಾಣಲಾಗದಷ್ಟು ದುಷ್ಕೃತ್ಯಗಳು ವಿಜಯನಗರದಲ್ಲಿ ಜರುಗುವಂತಿವೆ."

"ಇದರಲ್ಲೇನೂ ಅನುಮಾನವಿಲ್ಲ. ನಾನು ಈ ಮೊದಲು ನುಡಿದುದೇ ಪರಮಾವಧಿಯಲ್ಲ. ನಮ್ಮ ತಂದೆಯ ಬಳಿಯಲ್ಲಿ ಇನ್ನೊಂದು ಸಜಿತ್ತು. ಅದರ ಹೆಸರು 'ಬಾಧ್ಯಸ್ಥಸಬಂಧು' ವೆಂದು."

"ಸುಂದರೀ, ನನಗದು ಅರ್ಥವಾಗಲಿಲ್ಲ!!"

"ಅದನ್ನೇ ಹೇಳುತ್ತಿದ್ದೆ. ಆಸ್ತಿಯ ಆಶೆಯಿಂದ ಮತ್ತೊಬ್ಬನ ಮರಣವನ್ನು ಬಾಧ್ಯಸ್ಥನು ಎದುರುನೋಡುವುದುಂಟಷ್ಟೇ? ವಿಷಪ್ರಯೋಗವನ್ನು ವೈದ್ಯರರಿಯದಂತಹುದು ಇದಾಗಿತ್ತು. ಬಣ್ಣವಿಲ್ಲದ ರುಚಿರಹಿತವಾದ ಈ ವಿಷದ ಕೆಲವು ಬಿಂದುಗಳನ್ನು ವಾರಕ್ಕೊಂದೆರಡು ಬಾರಿ ಕೊಟ್ಟುಬಿಡುವುದು ಸುಲಭವಾಗಿತ್ತು. ಎಂತಹ ವೈದ್ಯನಾದರೂ ಸಾವಿರ ಇತರ ಕಾರಣಗಳನ್ನು ಹೇಳುತ್ತಿದ್ದನೇ ವಿನಾ ಒಳಗುಟ್ಟನ್ನು ಅರಿಯಲಾಗುತ್ತಿರಲಿಲ್ಲ."

"ಇವೆಲ್ಲವೂ ನನಗೆ ಹೊಸ ಸಂಗತಿಗಳು. ನೀನೀಗ ಹೇಳಿದ ವಿಚಿತ್ರ ವಿಷದ ಪರಿಣಾಮವೆಂತಹುದು !"

"ಸಂಪೂರ್ಣ ಆರೋಗ್ಯವುಳ್ಳವನೊಬ್ಬನ ಮೇಲೆ ಇದರ ಪ್ರಯೋಗವಾದೊಡನೆ ಅವನು ಉರಿಗೆ ಸಿಕ್ಕ ಬಾಳೆಯಂತೆ ಒಂದೆರಡು ದಿನಗಳಲ್ಲಿಯೇ ಕಂದಿಕುಂದಿ, ಕ್ರಮವಾಗಿ ಕೃಶನಾಗುತ್ತಾ ಕೃತಾಂತಲೋಕವನ್ನೇ ಸೇರಿಬಿಡುವನು."

"ಇದು ಬಹು ಭಯಂಕರ!"

"ನಮ್ಮ ತಂದೆಯು ಭಯಾನಕನೆಂದು ನಾನಾಗಲೇ ನುಡಿಯಲಿಲ್ಲವೇ? ಈ ವಿಷವನ್ನೇಕೆ 'ಬಾಧ್ಯಸ್ಥನ ಬಂಧು' ವೆಂದು ಕರೆಯುವರೆಂಬುದು ನಿಮಗೀಗ ಸ್ಪಷ್ಟವಾಯಿತು. ಈ ವ್ಯಾಪಾರವು ಅಲ್ಪ ಪ್ರಮಾಣದಲ್ಲಿ ನಡೆದಿದ್ದರೂ ಲಾಭವು ಅಪಾರವಾಗಿತ್ತು. ಅವನೀ ವ್ಯಾಪಾರವನ್ನು ಪ್ರತಾಪರುದ್ರನ ಮುಖಾಂತರವಾಗಿ ನಡೆಸುತ್ತಿದ್ದನಲ್ಲದೆ ಪ್ರತ್ಯಕ್ಷವಾಗಿ ಎಂದೂ ಮಾಡುತ್ತಿರಲಿಲ್ಲ."

"ಯಾರದು? ಹಿಂಸ್ರಜಂತುವಾದ ಪ್ರತಾಪರುದ್ರನೇ?"

"ಪ್ರತಾಪರುದ್ರನೆಂದು ಪ್ರಸಿದ್ಧನಾಗಿರುವ ವಸಂತನ ಮುಖಾಂತರವಾಗಿ. ನಿಮಗೆ ಅವರ ಪರಿಚಯವುಂಟೊ?"

"ಆ ನೀಚನೇ ನನ್ನನ್ನು ನೆಲಮನೆಯಲ್ಲಿ ಸೆರೆಹಾಕಿದನು; ಆ ಸೆರೆಮನೆಯ ಕಾವಲುಗಾರನೇ ಮಹಾರುದ್ರನು. ನೀನಿನ್ನು ಮುಂದರಿಸು. ಆ ವಿಷವನ್ನು ನಿವಾರಿಸಲು ಯೋಗ್ಯ ಪ್ರತೀಕಾರವಿಲ್ಲವೋ?"

"ಇದೆ, ಎಲ್ಲಕ್ಕೂ ವಿಚಿತ್ರ ಸಂಗತಿಯೆಂದರೆ ಇದಕ್ಕೆ ಬಲಿಯಾದವನನ್ನು ಪ್ರಾಣೋತ್ಕ್ರಮಣಕಾಲದಲ್ಲಿ ಸಹ ಕಟ್ಟುಮದ್ದನ್ನು ಕೊಟ್ಟು ಉಳಿಸಿಕೊಳ್ಳಬಹುದು. ಇದ

ಲ್ಲದೆ ಕೆಲವು ವಾರಗಳೊಳಗಾಗಿ ಅವನು ಮೊದಲಿನಂತೆಯೇ ಪೂರ್ಣಾರೋಗ್ಯದಿಂದ ರಂಜಿಸುವನು. ವಿಷವನ್ನು ಕೊಡುವುದನ್ನೂ ಅದನ್ನು ಪರಿಹರಿಸುವುದನ್ನೂ ನಾನು ಅನೇಕ ಸಲ ನೋಡಿದ್ದೇನೆ. "

" ಸುಂದರೀ,—ನೀನು—ನೀನೇ—ಅತ್ಯಂತ ಕರಾಳ ಮೂರ್ತಿಯಾಗಿ ನನ್ನನ್ನು ಕಂಗೆಡಿಸಿರುವಿ !! "

" ದೇವರೇ ಗತಿ ! ನಿಮ್ಮದು ತಪ್ಪು ಕಲ್ಪನೆ. ನನ್ನ ಮುಂದಾದ ಪ್ರಯೋಗವು ಮನುಷ್ಯರ ಮೇಲಲ್ಲ—ಇಲಿ, ಮೊಲ, ಹಕ್ಕಿ, ಬೆಕ್ಕು ಇಂತಹ ಪ್ರಾಣಿಗಳ ಮೇಲೆ. "

" ಉಶ್, ಈಗ ಸರಿಹೋಯಿತು. ಇನ್ನು ನಿರಾತಂಕವಾಗಿ ಉಸಿರಾಡಿಸಬಲ್ಲೆನು. ಅಂತೂ ಪ್ರಯೋಗವು—ಬರಿಯ ಪ್ರಯೋಗದ ದೃಷ್ಟಿಯಿಂದ—ಸ್ವಾರಸ್ಯವೆನಿಸುವುದು. ನಾನದನ್ನು ಒಮ್ಮೆ ನೋಡಬೇಕು. "

" ನಿಮ್ಮಿಷ್ಟವು ತಡವಿಲ್ಲದೆ ನೆರವೇರಿಸಲ್ಪಡಬಹುದು. ಏಕೆಂದರೆ ಇಲ್ಲಿಯೆ ಈ ಕ್ಷಣದಲ್ಲಿಯೇ ವಿಷವೂ ಕಟ್ಟುಮದ್ದೂ ನನ್ನ ಬಳಿಯಲ್ಲಿರುವುವು. "

" ನಿನ್ನಲ್ಲಿವೆ !!! ಅವು ಕೈವಶವಾದುದು ಹೇಗೆ? "

" ಆ ದಿನ ಅವನು ಈ ಪುಸ್ತಕವನ್ನು ತೆರೆದು ನೋಡುವಾಗ ಕಾಗದದ ಮಡಿಕೆಯೊಂದು ಜಾರಿಬಿತ್ತು. ಅದನ್ನವನು ನೋಡಲಿಲ್ಲ. ನಾನು ಕೂಡಲೇ ತೆಗೆದಿಟ್ಟು, ಕೊನೆಗೆ ನನ್ನ ಕರವಸ್ತ್ರದ ಕೊನೆಗೆ ಅದನ್ನಿಟ್ಟು ಹೊಲಿದುಬಿಟ್ಟೆನು. ಅದರಲ್ಲಿ ಮೇಲೆ ಹೇಳಿದ ಎರಡು ವಸ್ತುಗಳಲ್ಲದೆ ಬೇರೊಂದರ ಚೀಟಿಯೂ ಇರುವುದು. "

" ಅದೆಂತಹುದು ? "

"ಅದು ವಿಷವಲ್ಲದಿದ್ದರೂ ವಿಷಹೃದಯರಿಗೆ ಸಹಾಯಕಾರಿಯಾಗುವಂತಹುದು. ಇಂಥವರು ಪತ್ರವ್ಯವಹಾರಕ್ಕೆ ಅನುಕೂಲವಾಗುವಂತೆ ಬರೆದರೂ ಅಕ್ಷರಗಳು ಕಣ್ಣಿಗೆ ಕಾಣಿಸದಂತಹ ಮಸಿಯನ್ನು ಮಾಡುವ ಮಸಿಯ ಪುಡಿ ಮತ್ತು ಅದನ್ನು ನೀರಿನಲ್ಲಿ ಕಲಸಿ ತೊಳೆದೊಡನೆ ಅಕ್ಷರಗಳು ಎದ್ದು ಕಾಣುವಂತೆ ಮಾಡಬಲ್ಲ ಇನ್ನೊಂದು ಪುಡಿ."

"ಹ, ಹಹ! ಈ ಪುಟ್ಟ ಪುಸ್ತಕದಲ್ಲಿನ ಕಾಗದವ್ಕಿದು ಕೀಲಿಯ ಕೈಯಾಗಬಹುದು."

"ಆದರೂ ಆಗಬಹುದು. ಇನ್ನು ನಾನೆನ್ನುವುದು ಬಹಳಿಲ್ಲ. ಅದೃಶ್ಯ ಮಸಿಯೂ ಮತ್ತು ಅದರ 'ಉತಾರ'ವೂ ಬಹು ಮಹತ್ವವಾದುವಷ್ಟೇ? ಈ ಅದೃಶ್ಯ ಬರೆವಣಿಗೆಯನ್ನು ದೃಶ್ಯವನ್ನಾಗಿಸಿ ಓದಿದ ಮೇಲೆ ಬರೆದ ಓಲೆಯನ್ನು ನೀರಿನಲ್ಲಿದ್ದಲು ಪುನಃ ಬರೆವಣಿಗೆಯು ಮೊದಲಿನಂತೆಯೇ ಮಾಯವಾಗಿಬಿಡುವುದು. ಹೀಗೆ ಅನೇಕ ವೇಳೆ ಏನೂ ನಷ್ಟವಿಲ್ಲದೆ ಬರೆವಣಿಗೆಯನ್ನು ದೃಶ್ಯಾದೃಶ್ಯವನ್ನಾಗಿ ಮಾಡಬಹುದು."

"ಆಶ್ಚರ್ಯ, ಇದು ಮಹದಾಶ್ಚರ್ಯ! ಇವುಗಳೆಲ್ಲವೂ ನಿನ್ನ ಬಳಿಯಲ್ಲಿವೆಯೆಂದು ನೀನು ಹೇಳಲಿಲ್ಲವೇ?"

"ಇವೆ. ನಿಮಗೆ ಬೇಕಾದಾಗ ನೀವೇ ತೆಗೆದಿಟ್ಟುಕೊಳ್ಳಬಹುದು."

"ಈ ಎರಡನೆಯ ಚೀಟಿಯ ಉಪಯೋಗವನ್ನು ನಾವೀ ದಿನವೇ ಮಾಡಿಕೊಳ್ಳೋಣ. ಪ್ರಿಯೆ, ಈಗ ಹೇಳು. ನಿಮ್ಮ ತಂದೆಗೂ ಪ್ರ ತಾ ಪ ರು ದ್ರ ನಿ ಗೂ ನಿಕಟ ಸಂಬಂಧವಿತ್ತೋ?"

“ಕೆಲಮಟ್ಟಿಗಿತ್ತು. ನನಗದೂ ಸೇರುತ್ತಿರಲಿಲ್ಲ. ವಿಷ ಪ್ರಯೋಗದಿಂದಾಗಲೀ ಅಥವಾ ಆಯುಧಪ್ರಯೋಗದಿಂದಾಗಲೀ ಅವರು ಕೊಲೆಮಾಡದೆ ಇರುವವರಲ್ಲ. ಇಂಥ ನೀಚರನ್ನು ಕಂಡೊಡನೆ ನನ್ನ ಮೈ ಜುಮ್ಮೆನ್ನುತ್ತದೆ.”

“ಜುಮ್ಮೆನ್ನುತ್ತಿತ್ತು, ಎಂದು ಹೇಳು. ಏಕೆಂದರೆ ನೀನು ಅವರ ಸಹವಾಸದಿಂದ ಎಷ್ಟೋ ದೂರದಲ್ಲಿ ಇದ್ದು ಬಿಟ್ಟಿರುವೆ. ಈಗ ನಾವು ನಿಮ್ಮಪ್ಪನ ಪುಟ್ಟ ಪುಸ್ತಕವನ್ನು ಪರೀಕ್ಷಿಸೋಣ.”

“ಈ ಕೂದಲೆಳೆಗಳು ಮನೋರಮೆಯವು; ಈ ಸಂಕೇತಾಕ್ಷರಗಳೂ ಅವಳವು. ಮನೋರಮೆಯು ನಿಮ್ಮಪ್ಪನ ತಂಗಿ—ಎಂದರೆ ನಿಮ್ಮ ಸೋದರತ್ತೆ—ಅಲ್ಲವೇ ಸುಂದರಿ?”

“ಅಹುದು. ಆದರೆ ನಾನವಳನ್ನೆಂದೂ ನೋಡಿಲ್ಲ. ನಾನಿನ್ನೂ ಚಿಕ್ಕವಳಿರುವಾಗಲೇ ಅವಳು ಎದೆಯೊಡೆದು ಕೊಂಡು ಸತ್ತಳಂತೆ.”

“ಈ ವಿಷಯದಲ್ಲಿ ನಿಜಸ್ಥಿತಿಯು ನಿನಗೇನು ತಿಳಿದಿದೆ—ನಮ್ಮ ಕೃಷ್ಣರಾಯ ಪ್ರಭುಗಳೊಡನೆ ಅವಳ ವಿವಾಹವಾದುದು ಸಟೆಯೋ ದಿಟವೋ?”

“ಯಾವುದನ್ನೂ ಹೇಳಬರುವಂತಿಲ್ಲ. ನಮ್ಮ ತಂದೆಯನ್ನು ಹಲವು ಸಲ ಕೇಳಿದೆ; ಅವನು ಯಾವಾಗಲೂ ಮಾತನ್ನು ಮರೆಸಿಬಿಡುತ್ತಿದ್ದನು. ನನಗೆನಿಸುವುದೇನೆಂದರೆ ವಿವಾಹವಾಗಿತ್ತು. ಮನೋರಮೆಯ ಭಾವನೆಗಳು ಉದಾತ್ತವಾದುವೆಂದೂ ಗುಣಗಳು ಉತ್ಕೃಷ್ಟವಾದುವೆಂದೂ ಎಲ್ಲರೂ ಹೇಳುವುದಿಲ್ಲವೇ? ಇದಲ್ಲದೆ ಅವಳು ಕೃಷ್ಣರಾಯರ ಪತ್ನಿಯೆಂದೂ ಉಪಪತ್ನಿಯಲ್ಲವೆಂದೂ ಈ ಪುಟ್ಟ ಪುಸ್ತಕ

ದಿಂದ ಹೊರಬೀಳಬಹುದು. ”

“ ಹಾಗೆಯೇ ನನ್ನನುಮಾನವಿದೆ. ಆದರೆ ಅಂಥಾ ಮಹಾಕೃಪಣನೂ ಅತ್ಯಾಶೆಯುಳ್ಳವನೂ ಆದ ನಿಮ್ಮಪ್ಪನು ಈ ಕಾಗದಗಳಿಂದ ದ್ರವ್ಯವನ್ನೇಕೆ ಸಂಪಾದಿಸಲಿಲ್ಲ? ”

“ಅವನು ಹಾಗೆ ಯೋಚಿಸುತ್ತಿದ್ದುದು ನನಗೆ ಗೊತ್ತಿದೆ. ಅವನೊಮ್ಮೆ ಪ್ರತಾಪರುದ್ರನೊಡನೆ ಮಾತನಾಡುವಾಗ ಆ ಪತ್ರಗಳಿಂದೇನೂ ಪ್ರಯೋಜನವಿಲ್ಲವೆಂದು ಹೇಳುತ್ತಿದ್ದನು. ಯಾವುದೋ ಕಾಗದವೊಂದರ ಅರ್ಧಭಾಗವನ್ನು ದುರದೃಷ್ಟ ವಶದಿಂದ ನಮ್ಮ ಸೋದರತ್ತೆಯು ಕಳೆದುಕೊಂಡು ಬಿಟ್ಟ ಳಂತೆ, ಆ ಇಡೀ ಪತ್ರವೇ ನಮ್ಮಪ್ಪನ ಕೈಸೇರಿದ್ದರೆ ಬಹುಶಃ ಬಹು ಲಾಭವಾಗಬಹುದಾಗಿತ್ತು. ”

“ ಇಡೀ ಪತ್ರವು ನಿಮ್ಮ ತಂದೆಯ ಹತ್ತಿರವೆಂದೂ ಇರ ಲಿಲ್ಲವೋ ? ”

“ ಎಂದೂ ಇಲ್ಲ. ಮನೋರಮೆಗೂ ಕೃಷ್ಣರಾಯರಿಗೂ ಇದ್ದ ಸಂಬಂಧವು ತಪ್ಪಿಹೋದ ಮೇಲೆ ಅವಳು ಏಕಾಂತ ವಾಸದಲ್ಲಿಯೇ ಉಳಿದುಬಿಟ್ಟಳಂತೆ. ಯಮುನೆಯ ಮಧ್ಯ ಸ್ಥಿಕೆಯಿಂದ ಅವಳಿಗೆ ಸ್ವಲ್ಪ ವರ್ಷಾಶನವು ದೊರೆಯು ತ್ತಿತ್ತು. ನಮ್ಮಪ್ಪನು ಅವಳನ್ನು ಮೇಲಿಂದಮೇಲೆ ಸಂದ ರ್ಶಿಸಿ—ಅವಳ ಪ್ರಿಯನ ಅಥವಾ ಪತಿಯ, ಅದಾವುದೇ ಇರಲಿ, ಇದೀಗ ರಾಜನಾಗಿರುವವನ ಕಡೆಯಿಂದ ದ್ರವ್ಯ ವನ್ನೆಳೆಯಲು ಸಹಾಯವನ್ನು ಕೋರುತ್ತಿದ್ದನು. ಅಂತಹ ಹೀನಕಾರ್ಯಕ್ಕೊಪ್ಪದೆ ಅವಳು ಹಿಂದೆಗೆಯುತ್ತಿದ್ದಳಂತೆ. ಇದರಿಂದ ಅವರಿಬ್ಬರಲ್ಲಿ ಬಹು ಮನಸ್ತಾಪವುಂಟಾಯಿತು. ಕೊನೆಗೆ ಸೋದರತ್ತೆಯು ಇವನು ಹುಡುಕಲಾಗದಂತಹ

ಸ್ಥಳವನ್ನು ಆಶ್ರಯಿಸಿದಳು. ಅತಿ ದೀರ್ಘಕಾಲವು ಕಳೆದು ಹೋಯಿತು. ಅವಳು ತೀರಿಕೊಳ್ಳುವ ಸ್ವಲ್ಪ ಪೂರ್ವದಲ್ಲಿ— ಸುಮಾರು ಹದಿನಾರು ವರ್ಷಗಳ ಹಿಂದೆ—ನಮ್ಮ ತಂದೆಗೆ ಅವಳ ಇರವು ಗೊತ್ತಾದುದರಿಂದ ಪುನಃ ಬೇರೆಡೆಗೆ ನಡೆದಳಂತೆ; ಈ ಸಲ ಅವಳು ವಿಜಯಪುರದಲ್ಲಿನ ಹೊಸ ಸಂಸಾರವೊಂದನ್ನು ಬಂದು ಸೇರಿದಳು. ಅದು ವಸಂತನ ಮನೆಯು."

"ಏನು? ಪ್ರತಾಪರುದ್ರನಲ್ಲಿಯೇ?"

"ಇನ್ನೂ ಕೇಳಿ. ವಸಂತನು ಬಡವನು. ಇವನು ಪ್ರಾಮಾಣಿಕನೆಂದು ಮನೋರಮೆಯು ಭಾವಿಸಿದಳು. ವಸಂತನ ಹೆಂಡತಿಯಾದ ಸರಳೆಯು-ಅವಳಿಗಾಗ ಸುಮಾರು ೨೪ ವರ್ಷ—ಸೌಂದರ್ಯವಿದ್ಯೆಗಳಲ್ಲಿ ಹೆಸರಾಗಿದ್ದಳು. ಅವಳು ಸ್ವಲ್ಪ ಕಳಂಕಿತಳಾದ ಮೇಲೆ ತನ್ನ ಮನೆಯವರಿಂದಲೇ ತ್ಯಜಿಸಲ್ಪಟ್ಟಳು. ನಂತರ ಸ್ವಸಂತೋಷದಿಂದ ವಿಜಯಪುರದ ನಾಗಶೆಟ್ಟಿ ಬ್ಯಾಂಕಿನಲ್ಲಿಯ ಬಡಕಾರಕೂನನೊಡನೆ ಬಾಳುವೆಗಾರಂಭಿಸಿದಳು."

"ನಾಗಶೆಟ್ಟಿಯ ಬ್ಯಾಂಕ್!! ಎಲ್ಲವೂ ಚಮತ್ಕಾರ. ಈ ಎಲ್ಲ ವಿಷಯಗಳೂ ಒಂದೇ ಸರಪಣಿಯಲ್ಲಿಯ ಬಳೆಗಳಂತೆ ಹೊಂದಿಕೊಳ್ಳಲಾರಂಭಿಸಿವೆ. ಸುಂದರಿ, ಸಾಗು ಸಾಗು."

"ಮನೋರಮೆಗೊಮ್ಮೆ ದೇಹಸ್ವಾಸ್ಥ್ಯವಿರಲಿಲ್ಲ. ಅವಳಾಗ ತನ್ನ ಕಾಗದಪತ್ರಗಳನ್ನು ಏಕಾಗ್ರಚಿತ್ತಳಾಗಿ ಓದಿ ನೋಡಿ ಹಾಸಿಗೆಯ ಮೇಲಿಟ್ಟುಕೊಳ್ಳುತ್ತಿದ್ದಳು. ಆಗಾಗ ಕಣ್ಣಿನಿಂದ ನೀರು ಧಾರಾಕಾರವಾಗಿ ಇಳಿಯುತ್ತಿತ್ತು.

ಸಮೀಪದಲ್ಲಿಯೇ ಇದ್ದ ಸರಳೆಯು ಮನೋರಮೆಗೆ ಕಾಣ ದಂತೆ ಹಾರಿಹೋದ ಕಾಗದದ ತುಂಡೊಂದನ್ನು ಮೆಲ್ಲನೆ ತೆಗೆದುಕೊಂಡು, ಬಚ್ಚಿಟ್ಟು, ತನ್ನ ಪತಿಯಾದ ವಸಂತನು ಬಂದೊಡನೆಯೇ ಅದನ್ನವನಿಗಿತ್ತಳು. ಅದು ಮಾನ ಪತ್ರವೋ ಅಥವಾ ಮತ್ತೇನೋ, ಅಂತೂ ಅದರ ಮೇಲೆ ಈಗಿನ ರಾಜರಾದ ಕೃಷ್ಣರಾಯರ ಮುದ್ರಿಕೆಯಿತ್ತು. ಅವರು ಇನ್ನರ್ಥವನ್ನು ದೊರಕಿಸಿ ದುಡ್ಡನ್ನು ಗಳಿಸುವ ಉದ್ದೇಶ ವಾಗಿ ಅದನ್ನು ಜತನವಾಗಿಟ್ಟುಕೊಂಡರು. ಈ ಸಂಧಿ ಯಲ್ಲಿ ನಮ್ಮಪ್ಪನು ಅವಳಿರುವ ಸ್ಥಾನವನ್ನು ಪುನಃ ಕಂಡು ಹಿಡಿದು ಅಲ್ಲಿಗೆ ಬಂದನು. ಇವನ ಬರುವಿಕೆಯಿಂದ ಅವ ಳಿಗೆ ಮರಣವುಂಟಾಯಿತು. ಅವನು ಮನೋರಮೆಯ ಸಾಮಾನುಗಳೆಲ್ಲವನ್ನೂ ಸಾಗಿಸಿದನು."

"ಬಹುಶಃ ಅವನು ತನ್ನ ಅಮೋಘವಿಷವೊಂದನ್ನು ಪ್ರಯೋಗಿಸಿರಬಹುದು."

"ಅದು ದೇವರಿಗೇ ಗೊತ್ತು. ಆದರೂ ಸಹ ನನಗೂ ಅಂತಹ ಸಂಶಯವಿದೆ."

"ಆಗಲಿ. ಮುಂದೆ ಹೇಳು. ಬಹುಶಃ ವಸಂತನೂ ನಿಮ್ಮಪ್ಪನೂ ಸೇರಿ ಕಾಗದಪತ್ರಗಳ ವಿಷಯವಾಗಿ ಆಲೋ ಚಿಸಿರಬಹುದು."

"ಹಾಗೇನಿಲ್ಲ. ಅವರು ತಮ್ಮ ಕಾಗದವನ್ನು ಗೌಪ್ಯವಾ ಗಿಟ್ಟರು; ಇವನು ತನಗೆ ಸಿಕ್ಕಿದುದನ್ನು ಜತನವಾಗಿಟ್ಟನು. ಇವೆಲ್ಲವೂ ಈಗ ಹದಿನಾರು ವರ್ಷಗಳ ಹಿಂದೆ—ನಮ್ಮ ತಾಯಿಯ ಅವಸಾನ ಕಾಲದ ಸುಮಾರಿನಲ್ಲಿ—ನಡೆದು ಹೋದುವು. ಐದಾರು ವರ್ಷಗಳ ಹಿಂದೆ, ನಮ್ಮ ತಂದೆಯು

ತೀರಿಕೊಂಡ ಹಾಗೂ ನೀನು ನನ್ನನ್ನು ಕಂಡುಕೊಂಡ ಆ ಮನೆಗೆ ಬಂದಿರಲಾರಂಭಿಸಿದೆವು. ಮೂರು ವರ್ಷಗಳ ಹಿಂದೆ ಅವನಿಗೂ ಪ್ರತಾಪರುದ್ರನಿಗೂ ಜಗಳವಾಯಿತು. ಪ್ರತಾಪರುದ್ರನು ತನ್ನ ಕಾರ್ಯಸಾಧನೆಗಾಗಿ ಆದೇಸುಮಾರಿಗೆ ನಮ್ಮ ಮಗ್ಗುಲ ಮನೆಯಲ್ಲಿ ಬಂದಿರಲಾರಂಭಿಸಿದ್ದನು. ಈ ಪ್ರತಾಪರುದ್ರನೇ ಹಿಂದೆ ನಾಗಶೆಟ್ಟಿ ಬ್ಯಾಂಕಿನಲ್ಲಿ ಕಾರಕೂನನಾಗಿದ್ದ ವಸಂತನು. ಹಿಂದೆ ತಾವಿಬ್ಬರೂ ನೋಡಿದುದು ಪರಸ್ಪರರಿಗೆ ನೆನಪಾಯಿತು. ವಸಂತನು ತನ್ನ ಪತ್ನಿಯು ಮನೋರಮೆಯಿಂದ ಅರ್ಧ ಪತ್ರವೊಂದನ್ನು ದೊರಕಿಸಿದ್ದಳೆಂದೂ, ಅದರಿಂದ ಲಾಭವನ್ನು ಮಾಡಿಕೊಳ್ಳಬೇಕೆಂದು ಬಗೆದು ತಾನು ಕೃಷ್ಣರಾಯರೊಡನೆ ಪತ್ರವ್ಯವಹಾರವನ್ನು ಮಾಡಿದೆನೆಂದೂ, ಆ ತುಂಡು ಕಾಗದವನ್ನು ತಂದವರ ಕೈಯಲ್ಲಿ ಹಣ ಕೊಡಬೇಕೆಂದಾಗಲು ಸರಳೆಯನ್ನು ಕಳಿಸಿದೆನೆಂದೂ, ಅವಳಿದುವರೆಗೂ ಹಿಂದಿರುಗಿಲ್ಲವೆಂದೂ, ತನ್ನ ಸಾವಿರ ಶೋಧಗಳೂ ನಿಷ್ಫಲವಾದುವೆಂದೂ, ಅವಳು ತನ್ನ ನಿರ್ದೇಶಸ್ಥಾನಕ್ಕೆ ಹೋಗಿಲ್ಲವಾದುದರಿಂದ ದಾರಿಯಲ್ಲಿಯೇ ಅಪಮೃತ್ಯುವುಂಟಾಗಿರಬೇಕೆಂದೂ, ಅವಳನ್ನು ಹುಡುಕುವ ಸಲುವಾಗಿಯೇ ತಾನು ವಿಜಯನಗರಕ್ಕೆ ಬಂದುದೆಂದೂ, ಇದರಿಂದ ತನಗೆ ಮಿತಿಮೀರಿದ ದುಃಖವಾಗಿರುವುದೆಂದೂ ವಿವರಿಸಿದನು. ಅವನು ಮುಂದಿಲ್ಲಿಯೇ ನಿಂತು, ತನ್ನ ಈಗಿನ ಕಾರ್ಯದಲ್ಲಿ ಯಶಸ್ವಿಯಾಗತೊಡಗಿರುವನು."

"ಇವೆಲ್ಲಾ ನಿನಗೆ ತಿಳಿದುದು ಹೇಗೆ?"

"ಅವರಿಬ್ಬರೂ ನನ್ನ ಸಮಕ್ಷಮದಲ್ಲಿಯೇ ಮಾತನಾಡಿ

ದರು. ನಾನಾಗ ಹದಿನಾರೇ ವರ್ಷದವನಿದ್ದರೂ ಬಹು ಚುರುಕುಮತಿಯುವಳಾಗಿದ್ದೆ."

"ಇದರಿಂದ ಸ್ಪಷ್ಟವಾಗುವುದೇನೆಂದರೆ— ಇಸ್ಮರ್ಥ ಕಾಗದವು ನಾಶವಾಗಿದೆ ಅಥವಾ ಕ್ರೈಗೆ ಸಿಕ್ಕದಂತೆಲ್ಲಿಯೋ ಅಡಗಿಬಿಟ್ಟಿದೆ !!"

"ಮೊದಲು ನಮ್ಮಪ್ಪನೂ ಹಾಗೆಯೇ ಭಾವಿಸಿದ್ದನು. ಮುಂದೆ ಆ ಅಭಿಪ್ರಾಯವು ಸಂಪೂರ್ಣವಾಗಿ ಬದಲಾಗಿ ಬಿಟ್ಟಿತು."

"ಹಾಗಾದರೆ, ಸುಂದರೀ, ನೀವಪ್ಪನ ನಾಹಸಕ್ಕಿನ್ನೂ ಎಡೆಯಿದೆ !!"

"ಇದೆ. ಪ್ರಿಯುರೆ, ಇದೆ. ಪ್ರಸಿದ್ಧ ದರೋಡೆಖೋರ ನಾದ ತಿಪ್ಪಣ್ಣನೆಂಬುವನೊಬ್ಬನಿದ್ದನು. ಕೆಲ ವರ್ಷಗಳ ಹಿಂದೆ ಪ್ರತಾಪರುದ್ರನಿಗೆ ಅವನ ಪರಿಚಯಲಾಭವಾಯಿತು. ತಿಪ್ಪಣ್ಣನಿಗೆ ಆಗ ರುಕ್ಮಿಣಿಯೆಂಬೊಬ್ಬ ಉಪಪತ್ನಿಯಿದ್ದಳು. ಅವಳೀಗ ದಿಲ್ಲಿಯ ಧನಿಕನೊಬ್ಬನೊಡನೆ ಇರುವಳು. ಸುಮಾರು ಆರು ತಿಂಗಳ ಹಿಂದೆ ಪ್ರತಾಪರುದ್ರನು ಅವಳನ್ನು ಸಂದರ್ಶಿಸಿದನು. ಅವಳಾಗ ಪುರುಷವೇಷದಲ್ಲಿದ್ದರೂ ಅವ ನಿಗೆ ಅವಳ ಗುರುತು ಕೂಡಲೇ ಹೊಳೆಯಿತು. ಬಹುಶಃ ಕುದುರೆಯ ಸವಾರಿಯ ಹುಚ್ಚು ಅವಳಿಗಿರಬಹುದು. ಅವ ರಿಬ್ಬರಿಗೂ ಗುಪ್ತ ಸಂಭಾಷಣೆಯಾಯಿತೆನ್ನುವುದರಲ್ಲಿ ನನ ಗೇನೂ ಅನುಮಾನವಿಲ್ಲ. ಅವರ ಸಂಭಾಷಣೆಯಲ್ಲಿ ಪ್ರತಾಪ ರುದ್ರನೇನನ್ನೋ ಬಚ್ಚಿಡಲು ರುಕ್ಮಿಣಿಯು ಹೆಚ್ಚು ಪ್ರಶ್ನೆ ಗಳನ್ನು ಕೇಳುವಂತಾದುದಲ್ಲದೆ ಇದರಿಂದ ಇತರ ಕೆಲಸಗ ಳಿಗೂ ಆಸ್ಪದವುಂಟಾಯಿತು. ಕೆಲವು ದಿನಗಳ ನಂತರ

ಅವಳು ನಮ್ಮ ತಂದೆಯವರಲ್ಲಿಗೆ ಬಂದಳು. ಅವಳೊಡನೆ ಅರವಿಂದನೆಂಬ ವಿಲಾಸಿಯೊಬ್ಬನೂ ಇದ್ದನು. ಕೆಲ ಕಾಲಾನಂತರದಲ್ಲಿಯೇ ಪ್ರತಾಪರುದ್ರನೂ ಬಂದನು. ನನ್ನನ್ನು ಹೊರಗಟ್ಟಿದರು; ನಾನು ಬಾಗಿಲ ಬಳಿಯಲ್ಲಿ ನಿಂತು ಕೇಳಿದೆನು. ಅರವಿಂದನು ಇನ್ನುಳಿದ ಆ ಪತ್ರದ ತುಣುಕನ್ನು ಕೊಡಬೇಕೆಂದೂ ಅದಕ್ಕಾಗಿ ತಾನಿಷ್ಟು ದ್ರವ್ಯವನ್ನು ತೆರುವುದಾಗಿಯೂ ನಮ್ಮ ತಂದೆಯನ್ನು ಒಡಂಬಡಿಸಲು ಯತ್ನಿಸುತ್ತಿದ್ದನು."

"ಸುಂದರೀ, ಸ್ವಲ್ಪ ತಾಳು. ಈ ಚಿಕ್ಕ ಪತ್ರದ ಹಸ್ತಾಕ್ಷರವು ಸ್ತ್ರೀಯಳದು. ಅದನ್ನು ಓದುತ್ತೇನೆ."

"೭-೭-೧೭೯೪

"ನಾಳಿನ ಪತ್ರದಲ್ಲಿ ಎಲ್ಲಾ ವಿವರಗಳೂ ಕೊಡಲ್ಪಡುತ್ತವೆ. ರಾಸಾಯನಿಕ ದ್ರವ್ಯದಿಂದ ಎಂದಿನಂತೆ ಅದನ್ನು ಉಜ್ಜಬೇಕು. ನಾನು ಅ—ರನ್ನು ನಾಳೆ ನೋಡುತ್ತೇನೆ.

ರು—"

ಇದು ನೀನೆನ್ನುವ ರುಕ್ಮಿಣಿಯ ಪತ್ರವಲ್ಲವೋ? ಅವಳು ಕಾಣುವುದು ಅರವಿಂದನನ್ನಲ್ಲವೋ? ಇದಕ್ಕೆ ವಿಳಾಸವಿಲ್ಲ. ಒಂದು ವೇಳೆ ವಿಳಾಸವಿದ್ದ ಪಾಕೀಟನ್ನು ಹರಿದೊಗೆದಿರಬಹುದು."

"ಬಹುಶಃ ಅದು ಪ್ರತಾಪರುದ್ರನ ಹೆಸರಿನಲ್ಲಿರಬೇಕು. ಏಕೆಂದರೆ ಬಿಳಿಯ ಕಾಗದವು ಬಂದೊಡನೆ ರಾಸಾಯನಿಕ ದ್ರವ್ಯದಿಂದ ಅದನ್ನು ನಮ್ಮ ತಂದೆಯು ತೊಳೆದೇ ತೊಳೆಯುತ್ತಿದ್ದನಾದುದರಿಂದ ಅವಳು ಅವನಿಗೆ ಹೊಸದಾಗಿ ಹೇಳಿಕೊಡುವ ಅವಶ್ಯವಿರಲಿಲ್ಲ. ಇದಲ್ಲದೆ ಆವಳಾಗಲೀ ಅರವಿಂದ

ನಾಗಲೀ ನನ್ನ ತಂದೆಯನ್ನು ಪುನಃ ಸಂದರ್ಶಿಸಿದಂತಿಲ್ಲ. ನಾನಾಗ ಹೇಳಿದಂತೆ ಆ ದಿನದ ಚರ್ಚೆಯು ಪುನಃ ಅದು ಮರಕಳಿಸದ ಅಪೂರ್ವದು ಪರಿಯಲ್ಲಿ ಕೊನೆಗಂಡಿತು."

"ಸುಂದರಿ, ಅದೇತು?"

"ಅರವಿಂದನು ಇನ್ನರ್ಧ ಕಾಗದವನ್ನು ಬೇಡಿದೊಡನೆಯೇ ನಮ್ಮ ತಂದೆಯು ಬೆಚ್ಚಿಬಿದ್ದು 'ಎಂದ ಮೇಲೆ ಇನ್ನರ್ಧವು ನಾಶವಾಗಿಲ್ಲ; ನಿನಗೆ ಅದೆಲ್ಲಿರುವುದೆಂಬುದೂ ಗೊತ್ತಿದೆ!! ಒಂದು ವೇಳೆ ಅದೀಗ ನಿಮ್ಮ ವಶದಲ್ಲಿದ್ದರೂ ಇರಬಹುದು!!!' ಎಂದನು. ಅರವಿಂದನು ತನಗೇನೇನೂ ಗೊತ್ತಿಲ್ಲವೆಂದು ಪ್ರಮಾಣಮಾಡಿದನಲ್ಲದೆ ಈ ವ್ಯವಹಾರದಲ್ಲಿ ತಾನು ಮಧ್ಯಸ್ಥನು ಮಾತ್ರವೆಂದು ನುಡಿದನು. ಕೂಡಲೇ ನಮ್ಮಪ್ಪನು ಮುಖ್ಯ ಮನುಷ್ಯನೊಡನೆ ಮಾತ್ರ ತಾನು ಚರ್ಚಿಸುವೆನೆಂದು ಸಾರಿಹೇಳಿ, ಪ್ರತಾಪರುದ್ರನಿಗೆ ತಾನು ಉಸುರುವುದಕ್ಕಿಂತಲೂ ಹೆಚ್ಚು ತಿಳಿದಿದ್ದರೂ ಅಜ್ಞಾನವನ್ನು ವ್ಯಕ್ತಪಡಿಸುತ್ತಿರುವನೆಂದು ಅವನನ್ನು ದೂಷಿಸಿದನು. ವಸಂತನು ಅದನ್ನೆಂದಿಗೂ ಒಪ್ಪೆನೆಂದನು. ಜಗಳಕ್ಕಾರಂಭವಾಯಿತು. ಅರವಿಂದನು ರುಕ್ಮಿಣಿಯೊಡನೆ ಹೊರಟು ಹೋದನು. ಇವರಿಂದ ಯಾವ ಇತ್ಯರ್ಥವೂ ಆಗಲಿಲ್ಲ."

"ಪ್ರತಾಪರುದ್ರನು ನಿಮ್ಮಪ್ಪನನ್ನು ಸುಲಿಗೆ ಮಾಡಿ ಪತ್ರಗಳನ್ನೆತ್ತಿಕೊಂಡು ಹೋಗದಿದ್ದುದು ನಿಜವಾಗಿಯೂ ಆಶ್ಚರ್ಯ!!"

"ಹೀಗೆ ಬನ್ನಿ! ಇದು ನಡೆದ ಒಂದು ವಾರದೊಳಗಾಗಿಯೇ ಅವನಂತು ಸುಲಿಗೆಗೆಂದು ಬಂದೇ ಬಿಟ್ಟನು. ಆದರೆ ಒಂದು ಚೂರು ಕಾಗದವು ಸಹ ದೊರೆಯದಂತೆ ತಂದೆಯು

ವ್ಯವಸ್ಥೆಮಾಡಿದ್ದನು. ಪ್ರತಾಪರುದ್ರನೂ ಮಹಾರುದ್ರನೂ ಆ ನೀಚ ಕಾಪಾಲಿಕನೂ— ”

“ ಆ ಹೊಲೆಯನನ್ನು ನಾನು ಬಲ್ಲೆ!! ನಿಜಸ್ಥಿತಿಯೇನೆಂದರೆ ನನಗಿವರೆಲ್ಲರ ಪರಿಚಯವೂ ಇದೆ. ಹೂ, ನೀನು ಹೇಳು. ”

“ ಅಂತೂ ಆ ಮೂವರು ರಾತ್ರಿಯಲ್ಲಿ ಒಳಹೊಕ್ಕು ತಂದೆಯ ಕೈಕಾಲುಗಳನ್ನು ಬಿಗಿದುಹಾಕಿದರು. ಅವರಲ್ಲೊಬ್ಬನು ಕತ್ತಿಯನ್ನೆತ್ತಿ ನನ್ನ ಕತ್ತಿನ ಬಳಿ ಹಿಡಿದನು. ಮನೆಯನ್ನು ಅವರು ಬುಡಮೇಲು ಮಾಡಿದರೂ ಏನೂ ಪ್ರಯೋಜನವಾಗಲಿಲ್ಲ. ನಮ್ಮಪ್ಪನು ಅದನ್ನು ಹುಗಿದಿಟ್ಟಿರಬಹುದು. ಅಂತೂ ಅವರು ಪೂರ್ಣ ನಿರಾಶರಾದರು. ಮರುದಿನ ಮುಂಜಾವಿನಲ್ಲಿ ಪ್ರತಾಪರುದ್ರನು ನಮ್ಮ ತಂದೆಯ ಬಳಿಗೆ ಬಂದು ಸಮಾಧಾನವನ್ನು ಮಾಡಿಕೊಂಡನು. ಪರಸ್ಪರರು ಬಹು ಪ್ರಯೋಜನಕಾರಿಗಳಾಗಿದ್ದರೆಂದೂ ಮನಸ್ತಾಪದಿಂದ ಅವರಿಬ್ಬರೂ ಕೈಹಾಕಿದ ಅದಾವುದೋ ಕಾರ್ಯವು ಹದಗೆಡುವಂತಿದ್ದುದೆಂದೂ ನನ್ನ ಕಲ್ಪನೆ. ”

“ ಪ್ರಿಯೆ, ಅದು ಸರಿ. ಇನ್ನು ನಾನೂ ಮಾತನಾಡ ಬಯಸುತ್ತೇನೆ. ಇಲ್ಲೊಂದು ಮಡಿಚಿಟ್ಟ ಬಿಳಿಯ ಪತ್ರವಿದೆ. ಆ ರಾಸಾಯನಿಕ ದ್ರವ್ಯದಿಂದ ತೊಳೆದರೆ ಇನ್ನೂ ಕೆಲ ಗುಟ್ಟುಗಳು ರಟ್ಟಾಗಬಹುದು. ಅಲ್ಲವೇ, ಸುಂದರಿ ? ”

“ ಪರೀಕ್ಷಿಸಿದರೆ ತಾನಾಗಿಯೇ ತಿಳಿದುಬರುವುದಿಲ್ಲವೇ? ಅದಕ್ಕೆ ವಿಳಾಸವುಂಟೋ ? ”

“ಏನೇನೂ ಇಲ್ಲ. ಆ ಚಿಕ್ಕ ಪತ್ರದಂತೆ ಇದನ್ನೂ ಒಂದು ಲಕೋಟಿಯಲ್ಲಿ ಹಾಕಿರಬಹುದು. ಬಹುಶಃ ಆ ಪತ್ರದಲ್ಲಿ ತಿಳಿಸಿರುವ ಪತ್ರವೇ ಇದಾಗಿರಬಹುದು. ಒಂದು ವೇಳೆ

ಇದು ಪ್ರತಾಪರುದ್ರನಿಗೆ ಕಳುಹಿಸಲ್ಪಟ್ಟಿದ್ದರೆ, ನಿಮ್ಮಪ್ಪನಿಗೆ ಹೇಗೆ ದೊರೆಯಿತು?"

"ವಸಂತನು ಇನ್ನರ್ಧ ಪತ್ರಕ್ಕಾಗಿ ತಂದೆಯನ್ನು ಬಹು ದಿನ ಕಾಡಿದನು. ರುಕ್ಮಿಣಿ ಅರವಿಂದರೊಡನೆ ಸಂಧಾನವನ್ನು ಸಾಗಿಸುವುದಕ್ಕೆ ಆತಂಕವಿಲ್ಲವೆಂಬುದನ್ನು ಮನವರಿಕೆ ಮಾಡಿಕೊಡಲು ಅವನೀ ಪತ್ರಗಳನ್ನು ತಂದು ತೋರಿಸಿರಬಹುದು. ೭-೭-೧೭೯೪ರ ಸ್ವಲ್ಪ ಪೂರ್ವದಲ್ಲಿ ಅವರೆಲ್ಲರೂ ಒಂದುಗೂಡಿದುದು ನನಗೆ ನೆನಪಿದೆ."

"ನಾವಿನ್ನು ರಾಸಾಯನಿಕ ದ್ರವ್ಯದಿಂದ ಪತ್ರವನ್ನು ತಡಮಾಡದೆ ತೊಳೆಯತಕ್ಕದು. ಇನ್ನುಳಿದ ಪತ್ರಗಳನ್ನು ಬಿಡುವಿದ್ದಾಗ ನೋಡಬಹುದು."

ವೀರಪ್ಪನೂ ಸುಂದರಿಯೂ ಬಹು ಕುತೂಹಲಿಗಳಾಗಿ ಚಂಚಲದಿಟ್ಟಿಯಿಂದ ಒಬ್ಬರನ್ನೊಬ್ಬರು ನೋಡುತ್ತಾ ಮೇಲಕ್ಕೆದ್ದರು.

---

# ಪಿತನೂ ಪುತ್ರಿಯರೂ

"ತಾರಾ, ಪ್ರಿಯ ತಂಗೀ, ಶಾಂತಳಾಗು, ತಂದೆಗೆ ನಿನ್ನಲ್ಲಿ ಸಂಶಯವುಂಟಾಗಿಲ್ಲ."

ಮನೆಯ ಮುಂದಿನ ಹೂದೋಟದಲ್ಲಿದ್ದ ಲೀಲೆಯು ಕುದುರೆಯ ಗಾಡಿಯಿಂದಿಳಿದ ತನ್ನ ತಂಗಿಯಾದ ತಾರೆಯನ್ನು ನೋಡಿದಳು. ಒಡನೆಯೇ ತಾರೆಯ ಕಪೋಲಗಳು ನಾಚಿಕೆಯಿಂದ ಬಹು ಆರಕ್ತವಾದುವು. ಅವಳ ಭಯ

ವಿಹ್ವಲತೆಯು ಅವಳ ಸೌಂದರ್ಯವನ್ನು ಹೆಚ್ಚಿಸಿತು. ಲೀಲೆಯು ಅವಳ ಮನಃಸ್ಥಿತಿಯನ್ನರಿತು ಪ್ರೇಮಗೊಂಡಂತೆ ನುಡಿದು ಅವಳನ್ನು ಶಯ್ಯಾಗಾರಕ್ಕೆ ಕರೆದೊಯ್ದಳು.

"ಲೀಲಾ, ನಿನ್ನ ತಂಗಿಯನ್ನು ಕೈಬಿಡುವೆಯಾ?"

"ಹುಚ್ಚೀ, ಇಂದು ಹೀಗೇಕೆ ನುಡಿಯುತ್ತಿರುವೆ?"

"ಆದರೂ ಲೀಲಾ, ನನ್ನ ವಿಷಯದಲ್ಲಿ ನಿನಗಾವ ಅಭಿಪ್ರಾಯವಿದೆ? ಇಂಥಾ ನನ್ನ—ಬೇಸರೇ, ಮುಂದೇನು ಹೇಳಬೇಕು?"

"ತಾರಾ, ನಾನು ಬೇಡುತ್ತೇನೆ, ನೀನು ಅಧೀರಳಾಗಬೇಡ. ನಾನು ನಿನ್ನನ್ನು ಪ್ರೀತಿಸುವುದು ನಿನಗೆ ಗೊತ್ತಿಲ್ಲವೋ? ನಿನಗೆ ದುಃಖವಾದಾಗ ನಾನು ನಿನ್ನನ್ನು ಇನ್ನೂ ಹೆಚ್ಚಿನ ದುಃಖಕ್ಕೀಡುಮಾಡುವೆನೇ? ಇಲ್ಲ—ನಿಮ್ಮಕ್ಕನು ನಿನ್ನ ಹಿತಕ್ಕಾಗಿ ಎಲ್ಲವನ್ನೂ ಮರೆಮಾಡಿರುವಳು."

"ತಂದೆಯನ್ನು ಕಾಣಲು ನಾನು ಬಹು ಧೈರ್ಯದಿಂದ ನನ್ನ ಮನಃಸ್ಥಿತಿಯನ್ನು ಮರೆಮಾಡಲು ಮೊದಲು ಕಲಿಯಬೇಕು. ನಾಚಿಕೆಯೆಂಬ ಮುಳ್ಳನ್ನು ಕಿತ್ತೊಗೆಯಬೇಕು."

"ನಿನ್ನ ಪ್ರತಿಶಬ್ದವೂ ನಿನ್ನ ಪಶ್ಚಾತ್ತಾಪವನ್ನು ಸೂಚಿಸುತ್ತದೆ. ಹಾಗಾದರೆ ಅಯೋಗ್ಯನೊಬ್ಬನಲ್ಲಿ—ನನ್ನಲ್ಲಿ ಮುಚ್ಚುಮರೆಯೇಕೆ?—ಅನುರಕ್ತಳಾಗಿ, ಅಂಥವನಿಗಾಗಿ ನೀನು ನಾಚಿ ನಡೆಯುವಂತಾಗಿದೆಯೋ?"

"ಇಲ್ಲ—ಅಕ್ಕ ಹಾಗಲ್ಲ. ನನ್ನ ಪ್ರಿಯನು ಸರ್ವಶ್ರೇಷ್ಠ ಸದ್ಗೃಹಸ್ಥನು. ಅವನು ಶೀಘ್ರದಲ್ಲಿಯೇ ನಮ್ಮ

ತಂದೆಯ ಪರಿಚಯವನ್ನು ಮಾಡಿಕೊಂಡು, ಮೇಲಿಂದ ಮೇಲೆ ಇಲ್ಲಿಗೆ ಬರತೊಡಗುವನು. ಕಾಲಕ್ರಮದಲ್ಲಿ ನ.... ನ್ನ....ಪಾಣಿ....ಪಾಣಿಗ್ರಹಣವನ್ನೂ— ”

“ ಹೀಗಿದ್ದರೆ, ತಾರಾ, ನಿನಗೆ ದುಃಖವೇಕೆ? ”

“ಭೀಮರಾಯನ ಪ್ರೇಮದಿಂದ ನನಗೆ ದುಃಖವಾಗಿಲ್ಲ.”

“ ಭೀಮರಾಯ!! ಅವನು ನಿನ್ನ ಭಾವೀಪತಿ!!! ಅವನನ್ನು ನಾನು ಆ ದಿನವೇ ನೋಡಿದ್ದೇನೆ. ತಂಗಿ, ನಿನ್ನೀ ಮಾತಿನಿಂದ ನನಗೆ ಬಹು ಸಂತೋಷವಾಯಿತು. ”

“ ಆದರಿಂದ ನನಗೆ ದುಃಖವಾಗಿಲ್ಲ. ಆದರೆ ನನ್ನ ಪ್ರಿಯತಮಳ-ಅಭಿನ್ನ ಸ್ವರೂಪಳ-ಬಾಲ್ಯದಿಂದಲೂ ಜೀವಿತ ಸ್ವರೂಪಳಾದ ನಿನ್ನ ದೃಷ್ಟಿಯಲ್ಲಿ ನಾನು ಪತಿತಳಾದು....”

“ ಛೆ, ತಾರಾ, ಇನ್ನು ಸುಮ್ಮನಿರು. ನಿನ್ನಲ್ಲಿನ ನನ್ನ ಪ್ರೇಮಕ್ಕೆಂದೂ ಕೊರತೆಯಿಲ್ಲ. ಈಗ ನೋಡು, ಇದು ಚಮತ್ಕಾರವಲ್ಲವೇ? ಸ್ವಲ್ಪ ಹೆಚ್ಚುಕಡಿಮೆ ಒಂದೇ ಕಾಲದಲ್ಲಿ ನಾವಿಬ್ಬರೂ ಪ್ರೇಮ ವಿಚಾರವನ್ನರಿತುದು ಆಶ್ಚರ್ಯವಲ್ಲವೇ? ನಾನೂ ಪ್ರೀತಿಸಬಲ್ಲೆ. ನಿನ್ನನ್ನು ನೋಡಬಂದ ಆ ಶಿವಪ್ರಸಾದನನ್ನು ಮೋಹಿಸುವುದನ್ನು ನಾನು ಒಮ್ಮೆಲೇ ಕಲಿತುಬಿಟ್ಟೆ!! ”

“ ಅಹುದು, ಅವನು ನಿನ್ನ ಸಂದರ್ಶನ ವಿಚಾರವನ್ನೆತ್ತಿದನು. ನನ್ನ ಮನಃಸ್ಥಿತಿಯು ಹೇಳಿದುದನ್ನು ತಿಳಿದುಕೊಳ್ಳುವಂತೆ ಆಗ ಇರಲಿಲ್ಲ. ಆದರೂ ಸಹ ಅವನು ದುರ್ಮಾರ್ಗದಿಂದ ನಿನ್ನನ್ನು ವಶಪಡಿಸಿಕೊಳ್ಳಲು ಯತ್ನಿಸಿದನೆಂದೂ ಆದರೂ ನೀನು ನಿನ್ನ ಸೌಜನ್ಯದಿಂದ ಅವನನ್ನು ಗೆದ್ದು ನೈಜಪ್ರೇಮವನ್ನು ಹುಟ್ಟಿಸಿದೆಯೆಂದೂ ತಿಳಿದುಕೊಂಡೆನು.

ಅಕ್ಕಾ, ನಿನಗೀಗ ನಾಚಿಕೆಯೇ ?"

"ಕಾರ್ಯವು ನಡೆದುದು ಹಾಗೆಯೇ. ವಿರಾಮವಿದ್ದಾಗ ನಾನೆಲ್ಲಾ ವಿವರಿಸುವೆನು. ಈಗ ತಂದೆಯು ಎದ್ದು ಬರಬಹುದು. ಅವನು ಬಂದಾಗ ಬಹಳ ರಾತ್ರಿಯಾಗಿತ್ತು. ನಿನಗೆ ನಿದ್ರೆಯು ಬಂದಿರುವುದೆಂದು ಭಾವಿಸಿ ನಿನ್ನನ್ನು ಎಬ್ಬಿಸಬೇಡವೆಂದನು. ನೀನು ಮಾತನಾಡುವಾಗ ಜೋಕೆಯಿಂದಿರಬೇಕು."

ಇಬ್ಬರೂ ತಂದೆಯ ಬಳಿಗೆ ಹೋದರು. ವೆಂಕಟರಾಯನು ಎದ್ದು ಕುಳಿತಿದ್ದನು. ಮಕ್ಕಳನ್ನು ಕಂಡೊಡನೆ ಅವನ ಹೃದಯವು ಉಕ್ಕೇರಿತು. ಅವನು ಹೇಳಿದುದರ ಸಾರಾಂಶವಿದು.

ವೆಂಕಟರಾಯನು ಊರಿನಿಂದ ಬಹುದಿನಗಳಮೇಲೆ ಬಂದೊಡನೆ ಅವನ ಕಕ್ಕನ ಮಗನು ಮರ್ಯಾದೆಯಿಂದ ಬರಮಾಡಿಕೊಂಡನು. ಅವನಿಗೆ ಹೆಂಡತಿಯಿರಲಿಲ್ಲ. ಮಗನಿಗೆ ೨೩ ವರ್ಷ. ತಾನು ಬಹುದಿನಗಳಿಂದ ಸಂಪೂರ್ಣ ಆರೋಗ್ಯಶಾಲಿಯಾಗಿ ಸಶಕ್ತನಾಗಿದ್ದರೂ ಅದೇಕೋ ಇದ್ದಕ್ಕಿದ್ದಂತೆ ಅವನು ಶಿಥಿಲಕಾಯನಾಗಿಬಿಟ್ಟನು. ಒಮ್ಮೆಂದೊಮ್ಮೆ ಮೈಬಣ್ಣವು ಕುಂದಿತು; ಜೀರ್ಣಶಕ್ತಿಯು ಕಡಿಮೆಯಾಯಿತು; ನಿಶ್ಯಕ್ತಿಯು ತಲೆದೋರಿತು. ಸುಪ್ರಸಿದ್ಧ ವೈದ್ಯರೆಲ್ಲರೂ ಇದು ಇಂತಹುದೇ ರೋಗವೆಂದು ಹೇಳಲಾರದೆ ಹೋದರು. ಕೆಲ ತಿಂಗಳನಂತರ ಅವನು ಮೃತ್ಯುದೇವತೆಯನ್ನು ಮಸಗುಮಸಗಾಗಿ ಕಾಣತೊಡಗಿದನು. ಬಹುದಿನಗಳಮೇಲೆ ಮದುವೆಯಾಗಿದ್ದ ಆ ಸದ್ಗೃಹಸ್ಥನು ತನ್ನ ಮಗನ ಸ್ಥಿತಿಗಾಗಿ ಮರುಮರುಗಿದನು. ಆಗ ಬಹುದಿನ

ಗಳಿಂದಲೂ ಕಡೆಗಣಿಸಿದ್ದ ವೆಂಕಟರಾಯನು ಬಂದೊಡನೆ ತಾನು ದುಃಖಿತನಾದರೂ ಅವನನ್ನು ಮರ್ಯಾದೆಯಿಂದ ಬರಮಾಡಿಕೊಂಡನು. ಏಕೆಂದರೆ ತಾನೂ ತನ್ನ ಮಗನೂ ಇಲ್ಲದಂತಾದನಂತರ ಅಪಾರವಾದ ಅಖಿಳೈಶ್ವರ್ಯಕ್ಕೆ ವೆಂಕಟ ರಾಯನೇ ಬಾಧ್ಯಸ್ಥನಾಗಿದ್ದನು. ವೆಂಕಟರಾಯನು ಹಿಂದೆ ಅವನು ತನ್ನನ್ನು ಮಿತಿಮೀರಿ ನೋಯಿಸಿದ ವಿಷಯ ವನ್ನೆತ್ತಲಿಲ್ಲ. ತಾನು ಬಹುಮಾನವಾಗಿ ವಿಪರೀತವಾದ ಧನ-ಕನಕಗಳನ್ನು ಪಡೆದು ಹಿಂದಿರುಗಿ ಬಂದನು.

ಇವೆಲ್ಲವನ್ನೂ ಕೇಳಿ ಸುಂದರಿಯರಿಬ್ಬರಿಗೂ ಸಂತೋಷ ವಾದರೂ ಆ ಬಂಧುಗಳ ಹೀನಸ್ಥಿತಿಗಾಗಿ ಮರುಕವುಂಟಾ ಯಿತು. ಇದು ಹೆಚ್ಚಿನದು. ತಾವು ಅವರನ್ನೆಂದೂ ನೋಡಿ ರದಿದ್ದರೂ, ತಮ್ಮ ತಂದೆಯನ್ನವರು ಕಾಡಿದುದನ್ನು ಕೇಳಿ ದ್ದರೂ, ಕರುಣಾಮಯಿಗಳಾದ ಆ ಕೋಮಲೆಯರು ಕಳ ವಳಿಸದಿರಲಿಲ್ಲ.

ತಾನು ತಂದ ದ್ರವ್ಯದ ಸಹಾಯದಿಂದ ಹೊಸ ಭವ್ಯ ಭವನವೊಂದನ್ನು ಕೊಳ್ಳುವೆನೆಂದೂ, ಉಡಿಗೆ ತೊಡಿಗೆ ಮೊದಲಾದುವುಗಳಲ್ಲಿ ಶ್ರೀಮಂತಿಕೆಯಿಂದಿರಬೇಕೆಂದೂ ತಾನು ಹೋದಾಗಲೆಲ್ಲ ತಡೆಯಿಲ್ಲದೆ ದ್ರವ್ಯವು ದೊರೆಯುವು ದೆಂದೂ ವೆಂಕಟರಾಯನು ವಿವರಿಸಲು ಅಕ್ಕತಂಗಿಯರು ಆಹ್ಲಾದಿತರಾದರು. ತಮ್ಮ ಪ್ರೇಮಕಾರ್ಯಕ್ಕಿದು ಹಿತಾ ವಹವೆಂದು ಅವರು ಚಿಂತಿಸಿರಬಹುದು.

ಮಧ್ಯಾಹ್ನದಲ್ಲಿ ಮಾತಿನ ಮೇಲೆ ಮಾತು ಬರಲು ಇಂದು ಮತಿಕಮಲೆಯರು ಅಪಘಾತಕ್ಕೀಡಾದುದೇ ಮೊದಲಾದು ವನ್ನು ಮಕ್ಕಳಿಬ್ಬರೂ ವಿವರಿಸಿದರು. ಈ ವಿಚಿತ್ರಘಟನೆ

ಗಳೆಲ್ಲವನ್ನೂ ಕೇಳಿ ಮಕ್ಕಳ ಔದಾರ್ಯಕ್ಕಾಗಿ ವೆಂಕಟ ರಾಯನು ಅತ್ಯಂತಸಂತೋಷಭರಿತನಾದರೂ ಇಂದುಮತಿ ಯಿಂದ ಬಹುಮಾನಗಳನ್ನು ಸ್ವೀಕರಿಸಿದುದನ್ನು ಒಪ್ಪಿದಂತೆ ತೋರಲಿಲ್ಲ. ಅವರು ಛದ್ಮನಾಮಧಾರಿಗಳೆಂಬುದನ್ನು ಅವನೂ ಅನುಮೋದಿಸಿದನು. ವೈದ್ಯ ಧುಂಡೀರಾಜನಿಂದ ಆ ಮಗುವನ್ನು ತೆಗೆದುಕೊಂಡು ತಾನೇ ಸಂರಕ್ಷಿಸಲು ಅವನು ಸಿದ್ಧನಾಗಿದ್ದನು. ಆ ರಮಣಿಯರು ವೈದ್ಯರಿಗೆ ಕೊಟ್ಟ ೫೦ ಸಾವಿರದ ವಿಚಾರವು ತರುಣಿಯರಿಗೇ ತಿಳಿದಿರಲಿಲ್ಲವಾ ದುದರಿಂದ ವೆಂಕಟರಾಯನಿಗೂ ತಿಳಿದುಬರಲಿಲ್ಲ.

ಭೀಮರಾಯನ ವಿಚಾರವಾಗಲೀ ಶಿವಪ್ರಸಾದನ ಕತೆ ಯಾಗಲೀ ವೆಂಕಟರಾಯನಿಗೆ ಗೊತ್ತಾಗಲಿಲ್ಲ. ಅದೇ ಕೆಂಬುದರ ಮರ್ಮವನ್ನು ಓದುಗರು ಅರಿತಿರುವರು.

---

## ಭೀತಚಿತ್ತಳು

ಶಶಿಕಲೆಯು ಬಂದ ಮರುದಿನ ರಾತ್ರಿಯು ಒಂಬತ್ತು ಗಂಟೆಯಾಗಿತ್ತು. ತನ್ನ ಮಹಡಿಯ ಮೇಲಿನ ಕೋಣೆ ಯಲ್ಲಿ ಅವಳೊಬ್ಬಳೇ ಕುಳಿತಿದ್ದಳು. ಹೊರಗೆ ಜಡಿಮಳೆಯು ಬೀಳುತ್ತಿತ್ತು. ಕಿಟಕಿಯ ಕೆಳಭಾಗದಲ್ಲಿ ನೋಡಿದಳು. ತುಂಬಿದ ಹೊಳೆಯು ಕೃಷ್ಣವರ್ಣದಿಂದ ಭಯಬರುವಂತಿ ದ್ದಿತು. ನಿಶಾದೇವಿಯು ಹುಬ್ಬುಗಂಟಿಕ್ಕಿದ್ದಳು. ಪ್ರಾಣಿ ಗಳ ಧ್ವನಿಯೇನೂ ಕೇಳಿಸದೆ ಕ್ರೂರಳಾದ ಪ್ರಕೃತಿಯ ರಭ ಸವು ಮಾತ್ರ ಕೇಳಿಬರುತ್ತಿತ್ತು.

ಅವಳು ತನ್ನ ಹೀನ ಪರದೇಶಿತನದ ಜೀವನವನ್ನೂ ತನ್ನಂಥ ಸದ್ಗುಣಿಯ ಪ್ರೇಮವನ್ನು ಪುರಸ್ಕರಿಸದ ಅವನ ದುರುಳತನವನ್ನೂ ವಿಧವಿಧದಿಂದ ಚಿತ್ರಿಸಿಕೊಂಡು ಕಣ್ಣುಗಾಣದಾದಳು. ಅವಳಿದ್ದುದು ಮನೆಯ ಹಿಂಭಾಗ. ಬಹು ಕೆಳಗೆ ಆಳವಾದ ಹೊಳೆ. ಒಂದು ಹೆಜ್ಜೆಯನ್ನು ಕೋಣೆಯಿಂದ ಹೊರಗಿಡಲು ಸಾಧ್ಯವಿದ್ದರೆ ಶಶಿಕಲೆಯು ವರುಣಲೋಕವಾಸಿಯಾಗುವಳು. ಅವಳಿಗೂ ಹೊಳೆಗೂ ಒಂದೇ ಹೆಜ್ಜೆಯ ಅಂತರ! ಆದರೆ ಅವಳಿಗೆ ಬೇಕಾಗಿದ್ದುದು ಸಾವಲ್ಲ, ಸೇಡು!! ಸೇಡು ಈಡೇರದಿದ್ದರೆ ಪ್ರೇಮ. ಪ್ರೇಮವು ದೊರೆಯದಿದ್ದರೆ, ಸೇಡು. ಹೀಗೆಲ್ಲಾ ವಿಚಾರ ತರಂಗಗಳು ತರಂಗಿಣಿಯಲ್ಲಿಯ ತರಂಗಗಳಿಗಿಂತಲೂ ಅವಿರಳವಾಗಿ ಬರಲಾರಂಭಿಸಲು, ಅವಳು ಏಕಾಂತವಾಸವನ್ನು ಸೈರಿಸದಾದಳು. ನಿರ್ವಾಹವಿಲ್ಲದೆ ಮೆಲ್ಲನೆದ್ದಳು; ಬಾಗಿಲಿನವರೆಗೂ ಬಂದಳು; ಪುನಃ ಹಿಂದಿರುಗಿದಳು. ಕೈಯಲ್ಲೊಂದು ಮಿಣಿಗುಟ್ಟುವ ದೀಪವನ್ನು ತೆಗೆದುಕೊಂಡು ೩-೪ ಕೋಣೆಗಳ ಬಾಗಿಲುಗಳನ್ನು ನೂಕಿನೋಡಿದಳು. ಪ್ರಯೋಜನವಾಗಲಿಲ್ಲ.

ನಿಶ್ಶಬ್ದತೆಯಿಂದ ಒಳಗೊಂದು ತರದ ಭೀಕರತೆ ಯುದಿಸಿತ್ತು. ಒಳಹೊರಗಿನ ಇಂತಹ ಪರಿಸ್ಥಿತಿಯಿಂದ ಭೀತಚಿತ್ತಳಾದ ಶಶಿಕಲೆಯು ಎದುರಿನ ಕೋಣೆಯಲ್ಲಿದ್ದವರನ್ನು ಎಬ್ಬಿಸದೇ ಬಿಡುವುದಿಲ್ಲವೆಂದು ನಿಶ್ಚಯಿಸಿದಳು. ಬಾಗಿಲನ್ನು ಗಟ್ಟಿಯಾಗಿ ಒಂದೆರಡು ತಡವೆ ನೂಕಿದಳು. ಅಂತಹ ರಾತ್ರಿಯಲ್ಲಿ ಭೀಕರ ಪ್ರತಿಧ್ವನಿಯಾಯಿತು. ಒಳಗಿನವರಾರೂ ಉತ್ತರವೀಯಲಿಲ್ಲ. ಕೊನೆಗೆ ಬಾಗಿಲು ತಾನಾಗಿಯೇ ತೆರೆ

ಯಲ್ಪಟ್ಟಿತು. ಭೀರುವು ದೀಪವನ್ನು ತೆಗೆದುಕೊಂಡು ಕೋಣೆಯನ್ನು ಪ್ರವೇಶಿಸಿದಳು. ಕೂಡಲೆ ಭಯಾನಕ ಸ್ಥಿತಿಯು ನೂರ್ಮಡಿಯಾಯಿತು. ಅಲ್ಲಿ ಯಾರೂ ನೆಲಸಿ ದಂತಿರಲಿಲ್ಲ. ಮೋರೆಗೆಲ್ಲಾ ಜಾಡನ ಬಲೆಯು ಹತ್ತಿ ಕೊಂಡಿತು. ಬಾವಲಿಯು ಹಾರಾಡಿತು. ಮುರುಕು ಮರದ ಸಾಮಾನುಗಳು ನೆಲದ ಮೇಲೆಲ್ಲಾ ಹರಡಿದ್ದುವು. ಗೋಡೆಗೆ ತೂಗುಹಾಕಿದ್ದ ನಿಲವುಗಳ ಮೇಲೆ ಗಿಡಮೂಲಿಕೆಗಳು ಹೇರಲ್ಪಟ್ಟಿದ್ದುವು. ಅಕಾಲಪ್ರಸವಕ್ಕಾಗಿ ಪ್ರಯೋಗಿಸುವ ವಸ್ತುಗಳಿವೆಂಬುದನ್ನು ಆ ಬಾಲೆಯು ಅರಿಯಳು. ಇನ್ನೊಂದು ಗೋಡೆಗೆ ಚಿಕ್ಕದೊಡ್ಡ ಆಯುಧಗಳು ನೇತಾಡುತ್ತಿದ್ದುವು.

ಅಲ್ಲಿಯ ಕನ್ನಡಿಯ ಕಪಾಟುಗಳ ಬಾಗಿಲುಗಳು ತೆರೆಯಲ್ಪಟ್ಟಿದ್ದುವು. ಸಾವಿರಾರು ಗಾಜಿನ ಸೀಸೆಗಳಲ್ಲಿ ವಿವಿಧಾಕೃತಿಯ ವಿಚಿತ್ರ ಭಯಂಕರ ರೂಪಿನ ಮಗುವಿನ ಪಿಂಡಗಳು ರಾಸಾಯನಿಕ ದ್ರವ್ಯಗಳಿಂದ ಅಲ್ಲಿ ಕಾದಿಡಲ್ಪಟ್ಟಿದ್ದುವು. ಮೊದಲೇ ಕಂಗೆಟ್ಟ ಕೋಮಲೆಯು ಇನ್ನೂ ಪರವಶಳಾದಳು. ಅಂಜಿದವನ ಮೇಲೆ ಕಪ್ಪೆಯನ್ನೊಗೆದರೆಂಬ ಗಾದೆಯಂತೆ ಅವಳ ಮನಃಸ್ಥಿತಿಯಾಯಿತು. ಅವಳು ಹೊರಗೆ ಓಡಿಹೋಗಬೇಕೆಂದಳು. ಅವಳ ಅವಯವಗಳು ಅವಳಿಗೆ ಅವಿಧೇಯವಾದುವು. ಅವಳು ನಿಶ್ಶಕ್ತಳಾಗಿ ಕುಳಿತುಬಿಟ್ಟಳು. ಕಣ್ಣು ಕತ್ತಲೆಗುಡಿಸಿತು. ದೂರಿನ ಮೂಲೆಯಲ್ಲಿ ಮೂಳೆಗಳಿದ್ದಂತೆ ತೋರಲು, ಕಣ್ಣುಮುಚ್ಚಿದಳು.

ಅವಳು ಮೇಲಕ್ಕೆದ್ದಾಗ ದೀಪವು ಆರಿಹೋಗಿತ್ತು. ಆದರೂ ಹೇಗೋ ಧೈರ್ಯವನ್ನು ತಂದುಕೊಂಡು, ಹೊರಗೆ ಬಂದು, ಕೋಣೆಯ ಬಾಗಿಲನ್ನು ಮೊದಲಿನಂತೆಯೇ

ಮುಚ್ಚಿ, ದೀರ್ಘಶ್ವಾಸವನ್ನು ಬಿಟ್ಟು ಸಂಕಟದಿಂದ ಪಾರಾದ ವಳಂತೆ ಸಂತುಷ್ಟಳಾಗಿ ತನ್ನ ಕೋಣೆಯನ್ನು ಸೇರಿದಳು.

ಅವಳ ಭಯವಿನ್ನೂ ಕೊನೆಗಾಣಲಿಲ್ಲ. ರಾತ್ರಿಯಿನ್ನೂ ಬೇಕಾದಷ್ಟಿತ್ತು. ಏಕೆಂದರೆ ಯಾರೋ ಓಡಾಡಿದ ಸಪ್ಪಳವೂ ಸಣ್ಣ ಗಂಟೆಯ ನಾದವೂ ಕೇಳಿಬಂದುವು. ಶಶಿಕಲೆಯು ಬೆಚ್ಚಿಬಿದ್ದಳು. ಮೈಮೇಲೆ ಅರಿವು ಬಂದಂತಾಗಲು ತನ್ನ ಕೋಣೆಯ ಬಾಗಿಲನ್ನು ಮುಚ್ಚಿದಳು. ನಂತರ ಕಿಟಕಿಯ ಬಾಗಿಲನ್ನು ತೆರೆದು, ಅತ್ಯಾತುರತೆಯಿಂದ ದೀಪದ ಕಿರಣವೊಂದನ್ನು ಕಾಣಬೇಕೆಂದು ಕಾತರಳಾದಳು.

ಪುನಃ ಎರಡನೆಯ ಬಾರಿ ಗಂಟೆಯ ಸದ್ದಾಯಿತು. ಈ ಸಲ ಶಶಿಕಲೆಗಾವ ಸಂಶಯವೂ ಉಳಿಯಲಿಲ್ಲ.

ಈ ಗಂಟೆಯ ಸಪ್ಪಳವನ್ನು ಕೇಳಿ ಕೆಳವನೆಯಲ್ಲಿದ್ದ ಲೀಲಾವತಿಯು ಅಟ್ಟವನ್ನೇರಿ ಬರಬಹುದೆಂದು ಶಶಿಕಲೆಯು ಭಾವಿಸಿದಳು. ಸಮೀಪದ ಕೋಣೆಯೊಂದರಲ್ಲಿ ನಿಟ್ಟುಸಿರಿಟ್ಟ ಶಬ್ದವೂ ಯಾರೋ ಅಟ್ಟದ ಮೆಟ್ಟಲನ್ನೇರಿದ ಶಬ್ದವೂ ಕೇಳಿಬಂದುವು. ಶಶಿಕಲೆಯು ಬಾಗಿಲ ಬಳಿಗೆ ಬಂದು ಕೌತುಕನಯನೆಯಾಗಿ ಉಸಿರಾಡದೆ ನಿಂತು ಆಲಿಸಿದಳು. ನಡಿಗೆಯ ಮೇಲಿಂದ ಬಂದವಳು ಲೀಲಾವತಿಯೆಂದು ಶಶಿಕಲೆಯು ತಿಳಿದಳು. ಅವಳು ಅಲ್ಪ ಸ್ವಲ್ಪ ಕಾಲ ಪ್ರತಿಕೋಣೆಯ ಮುಂದೆಯೂ ನಿಂತು ಆಲಿಸಿ, ಮುಂದಡಿಯಿಡುತ್ತಿದ್ದಳು. ಕೊನೆಗವಳು ಅಂತೂ ಇಂತೂ ಶಶಿಕಲೆಯ ಕೋಣೆಯನ್ನು ದಾಟಿನಡೆದು, ಮಗ್ಗುಲಿನ ಕೋಣೆಯನ್ನು ಒಳಹೊಕ್ಕು ಒಳಗಿನಿಂದ ಬಾಗಿಲನ್ನು ಭದ್ರಪಡಿಸಿದಳು.

ಹಿಂದೊಮ್ಮೆ ಲೀಲಾವತಿಯು, "ಇಲ್ಲೊಬ್ಬ ಅಪ್ಸರೆಯಿದ್ದಾಳೆ. ಗೌಪ್ಯವು ಅವಳ ವಿಷಯದಲ್ಲಿ ಹೆಚ್ಚು ಅಗತ್ಯವಾಗಿದೆ. ಬಹು ದೊಡ್ಡ ಮನೆತನದವಳು" ಎಂದು ಪಾರ್ವತಿಗೆ ಹೇಳಿದವಳ ಕೋಣೆಯು ಅದಾಗಿತ್ತು.

ಹೊರಗೀಗ ಮಳೆಗಾಳಿಗಳ ಅಬ್ಬರವಿಳಿದಿತ್ತು. ಕೋಮಲೆಯೊಬ್ಬಳು ಮಗ್ಗುಲ ಕೋಣೆಯಲ್ಲಿ ಪ್ರಸವವೇದನೆಯಿಂದ ನೆರಳುತ್ತಿರುವುದು ಶಶಿಕಲೆಗೆ ತಿಳಿಯಿತು. ಲೀಲಾವತಿಯ ರಾಕ್ಷಸೀ ಜೀವನಕ್ಕಾಗಿ ಮರುಗಿದಳು, ಬೆದರಿದಳು, ಶಪಿಸಿದಳು. ಆದರೂ ಹೊಟ್ಟೆಯಲ್ಲಿದ್ದ ಸಿಟ್ಟು ರಟ್ಟೆಯಲ್ಲಿಲ್ಲವೆಂಬಂತಾಯಿತು.

ಮುಂದರ್ಧ ತಾಸಿನವರೆಗೂ ಮುಚ್ಚಿಮುಚ್ಚಿ ನರಳುವುದು ಕೇಳಿಸಿತು. ಶಶಿಕಲೆಯು ಹೌಹಾರಿ, ಸ್ತಬ್ಧಳಾಗಿ, ಕೌತುಕಾತಿರೇಕರಿಂದ ನಿಂತಲ್ಲಿಯೇ ತಲ್ಲೀನಳಾಗಿ ನಿಂತುಬಿಟ್ಟಿದ್ದಳು. ಕೊಟ್ಟಕೊನೆಗೆ ಅವಳ ತಲೆಯು ವಿಪರೀತಕಾದಂತಾಗಲು ಬಹು ಶೀತಳವಾಯುವಿದ್ದರೂ ಅದವಳಿಗೆ ಹಿತವೆನಿಸಲು ಕಿಟಕಿಯನ್ನು ಪೂರ್ಣವಾಗಿ ತೆರೆದು ಅಲ್ಲಿಯೇ ನಿಂತುಕೊಂಡಳು.

ಅವಳು ನಿಂತುಕೊಂಡಳು. ಒಂದೊಂದಾಗಿ ೮-೧೦ ನಿಮಿಷಗಳು ಕಳೆಯುವುದರೊಳಗಾಗಿ ಮಗ್ಗುಲಿನ ಕೋಣೆಯ ಕಿಟಕಿಯೂ ನಿಧಾನವಾಗಿ ತೆರೆಯಲ್ಪಟ್ಟಿತು. ಕಿಟಕಿಯ ಅಲ್ಪ ಸದ್ದಾದೊಡನೆಯೇ ಅದು ಆ ಅಪ್ಸರೆಯ ಕೋಣೆಯ ಕಿಟಕಿಯೆಂದು ಚಕಿತಳಾದ ಶಶಿಕಲೆಯು ದಿಟ್ಟಿಸಿ ನೋಡಿದಳು. ಮಂದಪ್ರಕಾಶವು ಹೊರಹೊಮ್ಮಿತು. ಇವಳಿಂತು ಸಂಪೂರ್ಣ ತಲ್ಲೀನಳಾಗಿ ಉಸಿರುಗಟ್ಟಿ ನಿಂತಿರಲು ಎಳ

ಗೂಸಿನ ಮಂದಸ್ವರವು ಕೇಳಬಂದಿತು.

ನಂತರ ಅದು ಇನ್ನೂ ಗಟ್ಟಿಯಾಗಿ ಚೀರಿದುದು ಕೇಳಿಸಿತು. ನಂತರ ಮೇಲಿನಿಂದ ನೀರಿನಲ್ಲಿ ಏನೋ ಬಿದ್ದ ಸಪ್ಪಳವಾಯಿತು. ಕಿಟಕಿಯ ಬಾಗಿಲು ಮೊದಲಿನಂತೆಯೇ ಪುನಃ ಮುಚ್ಚಲ್ಪಟ್ಟಿತು. ಎಲ್ಲೆಲ್ಲಿಯೂ ಪುನಃ ಶಾಂತತೆಯ ಸಾಮ್ರಾಜ್ಯವು ವಿಸ್ತರಿಸಲ್ಪಟ್ಟಿತು.

ಶಶಿಕಲೆಗೆ ಒಂದೇ ಸಲಕ್ಕೆ ಸಾವಿರಾರು ಹಾವು-ಚೇಳುಗಳು ಮೇಲೇರಿ ಬಂದು ಕಚ್ಚಿದ್ದರೂ ಇಂತಹ ಮನೋಯಾತನೆಯಾಗುತ್ತಿರಲಿಲ್ಲ. ಏನೂ ಅರಿಯದ್ದುದಕ್ಕೆ ತಾಯಿಯ ಒಪ್ಪಿಗೆಯಿಂದ ಲೀಲಾವತಿಯು ಮರಣಾಂತ ಶಿಕ್ಷೆಯನ್ನು ವಿಧಿಸಿದುದು ಸಹಿಸಲಸಾಧ್ಯವಾದ ಕೃತ್ಯವಾಗಿತ್ತು. ಅವಳು ಕಿಟಕಿಯನ್ನು ಕಡುಸಡುಗಿ ಮುಚ್ಚಿಬಿಟ್ಟು, ತನ್ನ ಹಾಸಿಗೆಯ ಮೇಲೆ ಬಂದೊರಗಿಕೊಂಡು ಪರಮಾತ್ಮನನ್ನು ಪ್ರಾರ್ಥಿಸತೊಡಗಿದಳು.

ಆದರೆ ಹೊರಗಿನಂತೆಯೇ ಒಳಗೂ ಕತ್ತಲೆಯಿತ್ತು—ಅದು ಅದೇ ಆಗ ನಡೆದ ಕ್ರೂರಕೃತ್ಯದ ಪ್ರತಿಚಿತ್ರವೆಂಬಂತೆ ಶಶಿಕಲೆಗೆ ಭಯಾನಕವಾಗಿತ್ತು. ಇವಳ ಮನೋರಾಜ್ಯದಲ್ಲಿಯೂ ಮುಂದಿನ ಮಾರ್ಗವನ್ನರಿಯಲಾಗದಷ್ಟು ದಟ್ಟವಾದ ಕತ್ತಲೆಯು ಹಬ್ಬಿತ್ತು—ಅದು ಅವಳ ಪ್ರೇಮ-ಸೇಡುಗಳ ಭಯಂಕರ ಸಂಕಲ್ಪದ ಭಯಾನಕ ಭವಿಷ್ಯದ ಸೂಚನೆಯಂತಿತ್ತು.

ಅತ್ತ ಆ ಅಪರಿಚಿತ ಅಪ್ಸರೆಯ ಮನಃಸ್ಥಿತಿಯು ಇದಕ್ಕೂ ಹೆಚ್ಚು ಕೀಳಾಗಿತ್ತು. ಲೀಲಾವತಿಯು ಮಾತ್ರ ಪುಣ್ಯವಂತಳು. ಏಕೆಂದರೆ- ಅವಳು ಹರ್ಷನಿರ್ಭರಳಾಗಿ ನಿದ್ರೆಯಲ್ಲಿದ್ದಳು.